ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೩೦

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಬ್ರಹ್ಮಮಹಾಪುರಾಣಂ

(ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

ಭಾಗ—೫

(೧೭೬—೨೧೬ ಅಧ್ಯಾಯಗಳು)



ಅನುವಾದಕ.

**ಹಾಸನದ ಪಂಡಿತ ವೆಂಕಟರಾವ್**

ಆಸ್ಥಾನ ವಿದ್ವಾನ್



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೩

# ಮುನ್ನುಡಿ

ಬ್ರಹ್ಮಪುರಾಣದ ಈ ಐದನೆಯ ಭಾಗದಲ್ಲಿ ವಿಷ್ಣುವಿನ ದಶಾವತಾರಗಳಲ್ಲಿ ಒಂದಾದ ಶ್ರೀಕೃಷ್ಣಚರಿತವು ವಿವರಿಸಲ್ಪಟ್ಟಿದೆ. ಅಷ್ಟಾದಶಮಹಾಪುರಾಣಗಳಲ್ಲಿಯೂ ಸಂದರ್ಭಾನುಸಾರವಾಗಿ ಕೃಷ್ಣಚರಿತವು ಸಂಕ್ಷೇಪವಾಗಿಯೋ ಅಥವಾ ವಿಸ್ತಾರವಾಗಿಯೋ ವರ್ಣಿತವಾಗಿರುವುದರಿಂದ ಶ್ರೀಕೃಷ್ಣನ ಮಾಹಾತ್ಮ್ಯೆಗೆ ಎಷ್ಟು ಪ್ರಾಶಸ್ತ್ಯವಿರುವುದೆಂದು ಹೆಚ್ಚಾಗಿ ಹೇಳಬೇಕಾದ ಅವಶ್ಯಕತೆ ಇಲ್ಲ. ದಕ್ಷಿಣದೇಶಕ್ಕಿಂತಲೂ ಉತ್ತರದೇಶದಲ್ಲಿ ಕೃಷ್ಣಚರಿತ್ರೆಯು ವಿಶೇಷಪ್ರಚಾರದಲ್ಲಿದೆ. ಸಾಧಾರಣಜನರಿಗೆ ಶ್ರೀಕೃಷ್ಣನ ಬಾಲಲೀಲೆಗಳ ವರ್ಣನೆಯು ಮನೋರಂಜಕವಾಗಿರುವುದು. ಮಹಾಭಾರತಯುದ್ಧದ ಪ್ರಾರಂಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶರೂಪವಾಗಿ ಮಾಡಿರುವ ಭಗವದ್ಗೀತೆಯು ಪ್ರಾಜ್ಞರಾದವರಿಗೂ ತತ್ತ್ವಾಭಿಲಾಷಿಗಳಿಗೂ ಆನಂದದಾಯಕವಾಗಿದೆ. ಭಗವದ್ಗೀತೆಯಲ್ಲಿ ನಿರೂಪಿತವಾಗಿರುವ ಗಹನವಿಷಯಗಳನ್ನು ಜನಗಳಿಗೆ ಸುಲಭವಾಗಿ ತಿಳಿಯುವಂತೆ ಮಾಡಲು ಅನೇಕ ವಿದ್ವಾಂಸರೂ, ಮಠಾಧಿಪತಿಗಳೂ, ಪ್ರಾಚೀನ ಮತ್ತು ಆಧುನಿಕ ಪಂಡಿತರೂ, ಪಾಶ್ಚಾತ್ಯವಿದ್ವಾಂಸರೂ ಅನೇಕ ವ್ಯಾಖ್ಯಾನಗಳನ್ನೂ ವಿವರಣೆಗಳನ್ನೂ ಬರೆದಿರುವರು. ಈ ಗ್ರಂಥವು ಪ್ರಪಂಚದ ನಾನಾಭಾಷೆಗಳಿಗೆ ಪರಿವರ್ತಿತವಾಗಿದೆ.

ಇಂತಹ ಉತ್ಕೃಷ್ಟಗ್ರಂಥದ ಉಪದೇಶಕನೂ ಭಗವಂತನೂ ಆದ ಶ್ರೀಕೃಷ್ಣಪರಮಾತ್ಮನ ಅದ್ಭುತಲೀಲೆಗಳನ್ನು ತಿಳಿದು ಇಹಪರಸಾಧನರೂಪವಾದ ಶ್ರೇಯಸ್ಸನ್ನು ಹೊಂದಬೇಕಾದುದು ಸಕಲಜನರಿಗೂ ಮುಖ್ಯಕರ್ತವ್ಯವಾಗಿದೆ. ಇಂತಹ ಶ್ರೇಯಸ್ಸನ್ನು ಪಡೆದು ಜನರು ಕೃತಕೃತ್ಯರಾಗಲೆಂಬ ಘನವಾದ ಉದ್ದೇಶದಿಂದ ನಮ್ಮನ್ನಾಳುವ ಕರ್ನಾಟಕಸಿಂಹಾಸನಾಧೀಶ್ವರರೂ ಸನಾತನಧರ್ಮಾಭಿಮಾನಿಗಳೂ, ದೈವಭಕ್ತರೂ ಆದ **ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರು ಅಷ್ಟಾದಶಪುರಾಣಗಳನ್ನೂ ಅನೇಕ ವೇದಾಂತಗ್ರಂಥಗಳನ್ನೂ ಸುಲಭವಾದ ಕನ್ನಡಭಾಷೆಯಲ್ಲಿ ಪ್ರಕಾಶಪಡಿಸಲು ಅವಕಾಶವಿತ್ತು ಸಕಲಸಜ್ಜನರ ಶ್ರೇಯೋಭಿವೃದ್ಧಿಗೆ ಕಾರಣರಾಗಿರುತ್ತಾರೆ. ಇಂತಹ ನಮ್ಮ ಪ್ರಭುಗಳಿಗೂ ಅವರ ಕುಟುಂಬಕ್ಕೂ, ರಾಷ್ಟ್ರದ ಸಕಲ ಪ್ರಜೆಗಳಿಗೂ ಶ್ರೀಕೃಷ್ಣಪರಮಾತ್ಮನು ಆಯುರಾರೋಗ್ಯೈಶ್ವರ್ಯಗಳನ್ನು ಅನುಗ್ರಹಿಸಲೆಂದು ಆ ದಯಾಮಯನಾದ ಭಗವಂತನನ್ನು ಸದಾ ಪ್ರಾರ್ಥಿಸುತ್ತೇನೆ.

ವ್ಯಯ ಸಂ॥ ಫಾಲ್ಗುಣ ಬ॥ ನವಮಿ
ಶನಿವಾರ
ಮೈಸೂರು, 15-3-47.

**ಅನುವಾದಕ.**

# ವಿಷಯಾನುಕ್ರಮಣಿಕೆ



ಪುಟಸಂಖ್ಯೆ

ದುದಲ್ಲದೆ ಅವಳ ಆರು ಮಕ್ಕಳನ್ನೂ ಹುಟ್ಟಿದೊಡನೆಯೇ ಕೊಂದುದು. ವಿಷ್ಣುವು ತನ್ನ ಯೋಗಮಾಯೆಗೆ ಅಪ್ಪಣೆ ಮಾಡಿದುದು. 90

**ನೂರೆಂಭತ್ತೆರಡನೆಯ ಅಧ್ಯಾಯವು—**

ಭಗವಂತನ ಅಪ್ಪಣೆಯಂತೆ ಯೋಗಮಾಯೆಯು ದೇವಕಿಯ ಏಳನೆಯ ಗರ್ಭವನ್ನು ಸೆಳೆದು ರೋಹಿಣಿಯಲ್ಲಿಟ್ಟು ತಾನು ಯಶೋದೆಯ ಜಠರದಲ್ಲಿ ನೆಲೆಸಿದುದು. ಪರಮಾತ್ಮನು ಶುಭಸಮಯದಲ್ಲಿ ದೇವಕಿಯ ಗರ್ಭವನ್ನು ಪ್ರವೇಶಿಸಿದುದು. ಗರ್ಭಿಣಿಯಾದ ದೇವಕಿಯನ್ನು ದೇವತೆಗಳು ಸ್ತುತಿಸಿದುದು. ಭಗವಂತನು ಅವತರಿಸಿದಾಗ ದೇವತೆಗಳು ಹೂಮಳೆಗರೆದುದು. ದೇವಕೀವಸುದೇವರು ಪರಮಾತ್ಮನನ್ನು ಸ್ತುತಿಸಿದುದು. ಆತನ ಅಪ್ಪಣೆಯಂತೆ, ವಸುದೇವನು, ಶಿಶುರೂಪವನ್ನು ತಾಳಿದ ಆತನನ್ನು ಯಶೋದೆಯ ಬಳಿ ಮಲಗಿಸಿ ಯೋಗಮಾಯೆಯನ್ನು ದೇವಕಿಯ ಬಳಿಗೆ ತರಲು, ಆ ಯೋಗಮಾಯೆಯ ಅಳುವನ್ನು ಕೇಳಿ, ದೂತರು ಕಂಸನಿಗೆ ದೇವಕಿಯು ಹೆತ್ತ ವೃತ್ತಾಂತವನ್ನು ತಿಳಿಸಿದುದನ್ನು ಆಲಿಸಿ ಕಂಸನು ಸೆರೆಮನೆಗೆ ಬಂದು ದೇವಕಿಯು ಅಳುತ್ತಿದ್ದರೂ ಲಕ್ಷ್ಯ ಮಾಡದೆ, ಬಲಾತ್ಕಾರದಿಂದ ಆ ಕನ್ಯೆಯನ್ನು ಕಿತ್ತುಕೊಂಡು ಬಂಡೆಯಮೇಲೆ ಅಪ್ಪಳಿಸಹೋಗಲು, ಆ ಕನ್ಯೆಯು ಆಕಾಶಕ್ಕೆ ಹಾರಿ ತನ್ನ ಸ್ವಸ್ವರೂಪವನ್ನು ತಾಳಿ ಕಂಸನನ್ನು ಜರೆದು ದೇವತೆಗಳು ಸ್ತುತಿಸುತ್ತಿರುವಂತೆ ಕಣ್ಮರೆಯಾದುದು. 102

**ನೂರೆಂಭತ್ತಮೂರನೆಯ ಅಧ್ಯಾಯವು—**

ಕಳವಳಕ್ಕೀಡಾದ ಕಂಸನು ಪ್ರಲಂಬಾದಿ ರಾಕ್ಷಸರನ್ನು ಕರೆಸಿ ಯೋಗಮಾಯೆಯು ನುಡಿದ ಸಂಗತಿಯನ್ನು ತಿಳಿಸಿ,

ಪುಟಸಂಖ್ಯೆ

ಸಿಕ್ಕಿದ ಎಳೆ ಮಕ್ಕಳನ್ನು ಕೊಲ್ಲುವಂತೆ ಅವರಿಗೆ ಅಪ್ಪಣೆ ಯಿತ್ತು ಕಳುಹಿಸಿಬಿಟ್ಟನಂತರ, ದೇವಕೀವಸುದೇವರ ಬಳಿಗೆ ಬಂದು ಅವರನ್ನು ಸಂತೈಸಿ ಸೆರೆಯಿಂದ ಬಿಡಿಸಿದುದು. 110

**ನೂರೆಂಭತ್ತನಾಲ್ಕನೆಯ ಅಧ್ಯಾಯವು—**

ವಸುದೇವನು ನಂದಾದಿಗಳಿಗೆ ನಡೆದ ಸಂಗತಿಯನ್ನು ವಿವರಿಸಿ ಗೋಕುಲಕ್ಕೆ ಅವರನ್ನು ಕಳುಹಿಸಿದುದು. ಪೂತನಾ ಸಂಹಾರವು. ಯಶೋದೆ ನಂದ ಮೊದಲಾದವರು, ಪೀಡಾ ಪರಿಹಾರಕ್ಕಾಗಿ ಶಾಂತಿಕರ್ಮಗಳನ್ನು ನೆರವೇರಿಸಿದುದು. ಕೃಷ್ಣನು ಶಕಟನನ್ನು ಕೆಡವಿದುದನ್ನು ಕಂಡು, ಗೋಪ ಗೋಪಿಯರು ಆಶ್ಚರ್ಯಪಟ್ಟರು. ಯಶೋದೆಯು ಕೃಷ್ಣನು ಕೆಡವಿದ ಬಂಡೆಯನ್ನು ಪೂಜಿಸಿದುದು. ವಸು ದೇವನ ಪ್ರೇರಣೆಯಿಂದ ಗರ್ಗಮುನಿಯು ಗುಟ್ಟಾಗಿ ಬಂದು ಬಲರಾಮಕೃಷ್ಣರಿಗೆ ಜಾತಕರ್ಮಾದಿ ಸಂಸ್ಕಾರ ಗಳನ್ನು ನೆರವೇರಿಸಿದುದು. ಯಮಲಾರ್ಜುನ ಭಂಜನ ವೃತ್ತಾಂತವು. ಕೃಷ್ಣನಿಗೆ ದಾಮೋದರನೆಂಬ ಹೆಸ ರಾದುದು. ಮಹೋತ್ಪಾತಗಳನ್ನು ಕಂಡು ಹೆದರಿದ ಗೊಲ್ಲರು ವೃಂದಾವನಕ್ಕೆ ತೆರಳಿ ಅಲ್ಲಿ ನೆಲೆಸಿದುದು. ಬಲರಾಮಕೃಷ್ಣರ ಬಾಲಲೀಲೆಗಳು. 113

**ನೂರೆಂಭತ್ತೈದನೆಯ ಅಧ್ಯಾಯವು—**

ಬಲರಾಮನಿಲ್ಲದವೇಳೆಯಲ್ಲಿ ಕೃಷ್ಣನು ಕಾಳಿಯಮಡುವಿಗೆ ಹೋಗಿ ಅಲ್ಲಿ ಧುಮುಕಿದುದನ್ನೂ ಕಾಲಿಯನು ಕೃಷ್ಣನಿಗೆ ಸುತ್ತುಕೊಂಡಿರುವುದನ್ನೂ ಗೋಪಾಲಕರು ಅಳುತ್ತಾ ತಿಳಿ ಸಿದುದನ್ನು ಕೇಳಿ ಸಿಡಿಲುಹೊಡೆದಂತಾದ ಯಶೋದಾ ನಂದರು ಗೋಪಗೋಪಿಯರೊಡನೆ ಅಲ್ಲಿಗೆ ಹೋಗಿ ಆ ರೀತಿಯಿದ್ದ ಕೃಷ್ಣನನ್ನು ಕಂಡು ಮೂರ್ಛಿತರಾಗಿ

ಪುಟಸಂಖ್ಯೆ

ಯುಕ್ತಿಯುಕ್ತವಾಗಿ ಒಪ್ಪಿಸಿದುದು. ಗಿರಿಯಜ್ಞನಿರತ ರಾದ ಆ ನಂದಾದಿಗಳನ್ನು ಶ್ರೀಕೃಷ್ಣನೇ ಗಿರಿರೂಪದಿಂದ ಮಾತನಾಡಿಸಿ ಅವರಿಗೆ ವರಗಳನ್ನಿತ್ತುದು. 141

**ನೂರೆಂಭತ್ತೆಂಟನೆಯ ಅಧ್ಯಾಯವು—**

ತನ್ನ ಉತ್ಸವವನ್ನು ನಿಲ್ಲಿಸಿಬಿಟ್ಟರೆಂಬ ಕೋಪದಿಂದ ಇಂದ್ರನು ಸಂವರ್ತಕಾದಿ ಮೇಘಗಳನ್ನು ಕರೆದು ಗೋಕುಲದಮೇಲೆ ಮಳೆಸುರಿಸಿ ಪೀಡಿಸುವಂತೆ ಕಳುಹಿಸಲು, ಆ ಮೇಘಗಳ ಮಳೆಗೆ ಸಿಕ್ಕಿ ಪೀಡಿತರಾದ ಗೋಪಾಲಕರು ವ್ಯಥೆಪಡು ತ್ತಿರುವುದನ್ನು ಕಂಡು ಕೃಷ್ಣನು ಗೋವರ್ಧನಪರ್ವತ ವನ್ನು ಕೊಡೆಯಂತೆ ಅವರಮೇಲೆ ಹಿಡಿದು ಸಂರಕ್ಷಿಸಿ ದುದು. ಏಳುದಿವಸಗಳು ಎಡೆಬಿಡದೆ ಮಳೆ ಸುರಿಸಿದ ನಂತರ ಇಂದ್ರನು ಆ ಮೇಘಗಳನ್ನು ಹಿಂದಕ್ಕೆ ಕರೆಸಲು ಗೋಪಾಲಕರು ಎಂದಿನಂತೆ ತಮ್ಮ ಮನೆಗಳಿಗೆ ಹೋದುದು. ಇಂದ್ರನು ರಹಸ್ಯದಲ್ಲಿ ಕೃಷ್ಣನಿಗೆ ನಮಸ್ಕರಿಸಿ ಗೋವುಗಳ ವಾಕ್ಯದಂತೆ ಗೋವಿಂದ ಪಟ್ಟಾಭಿಷೇಕವನ್ನು ನಡೆಸಿ ಅರ್ಜುನನಿಗೆ ಸಹಾಯಮಾಡುವಂತೆ ಪ್ರಾರ್ಥಿಸಿ ದುದು. ಕೃಷ್ಣನು ಭೂಭಾರವನ್ನು ಇಳುಹುವಂತೆ ತಿಳಿ ಸಿದ ನಂತರ ಇಂದ್ರಕೃಷ್ಣರು ಪರಸ್ಪರ ಆಲಿಂಗಿಸಿ ತಮ್ಮ ತಮ್ಮ ನಿವಾಸಗಳಿಗೆ ತೆರಳಿದುದು. 154

**ನೂರೆಂಭತ್ತೊಂಭತ್ತನೆಯ ಅಧ್ಯಾಯವು—**

ಕೃಷ್ಣನ ಅದ್ಭುತಲೀಲೆಗಳನ್ನು ಕಂಡು ವಿಸ್ಮಿತರಾದ ಗೋಪರು ಕೃಷ್ಣನನ್ನು ಪ್ರಶ್ನಿಸಿದುದು. ಶರತ್ಕಾಲದ ಸೊಬಗನ್ನು ಕಂಡು ಸಂತುಷ್ಟನಾದ ಕೃಷ್ಣನು ಮುರಳಿಯನ್ನೂದಲು ಗೋಪಿಯರು ಕುಂಜವನಕ್ಕೆ ಬಂದುದು. ರಾಸಲೀಲೆ. ಅರಿಷ್ಟನೆಂಬ ರಾಕ್ಷಸನು ವೃಷಭರೂಪದಿಂದ ಬರಲು ಕೃಷ್ಣನು ಅವನನ್ನು ಸಂಹರಿಸಿದುದು. 165

ಪುಟಸಂಖ್ಯೆ

ಶ್ರೀಃ

ಐದನೆಯ ಭಾಗವು

# ಅಥ ಮ ಹಾ ಪು ರಾ ಣೇ ಬ್ರಾ ಹ್ಮೇ

## ಷಟ್ಸಪ್ತತ್ಯಧಿಕಶತತಮೋಽಧ್ಯಾಯಃ

॥ ಮುನಯ ಊಚುಃ ॥

ನ ಹಿ ನಸ್ತೃಪ್ತಿರಸ್ತೀಹ ಶೃಣ್ವತಾಂ ಭಗವತ್ಕಥಾಂ ।
ಪುನರೇವ ಪರಂ ಗುಹ್ಯಂ ವಕ್ತುಮರ್ಹಸ್ಯಶೇಷತಃ ॥ ೧ ॥

ಅನಂತವಾಸುದೇವಸ್ಯ ನ ಸಮ್ಯಗ್ವರ್ಣಿತಂ ತ್ವಯಾ ।
ಶ್ರೋತುಮಿಚ್ಛಾಮಹೇ ದೇವ ವಿಸ್ತರೇಣ ವದಸ್ವ ನಃ ॥ ೨ ॥

॥ ಬ್ರಹ್ಮೋವಾಚ ॥

ಪ್ರವಕ್ಷ್ಯಾಮಿ ಮುನಿಶ್ರೇಷ್ಠಾಃ ಸಾರಾತ್ಸಾರತರಂ ಪರಂ ।
ಅನಂತವಾಸುದೇವಸ್ಯ ಮಾಹಾತ್ಮ್ಯಂ ಭುವಿ ದುರ್ಲಭಂ ॥ ೩ ॥

---

### ನೂರೆಪ್ಪತ್ತಾರನೆಯ ಅಧ್ಯಾಯವು

೧. ಮುನಿಗಳು ಕೇಳಿದರು :—ಭಗವಂತನ ಚರಿತ್ರೆಯನ್ನು ಎಷ್ಟು ಕೇಳಿದರೂ ನಮಗೆ ತೃಪ್ತಿಯಾಗುವುದಿಲ್ಲ. ಆದುದರಿಂದ ಶ್ರೇಷ್ಠವಾಗಿಯೂ, ರಹಸ್ಯವಾಗಿಯೂ ಇರುವ ಅವನ ಚರಿತ್ರೆಯನ್ನು ಇನ್ನೂ ವಿಸ್ತಾರವಾಗಿ ತಿಳಿಸು.

೨. ಅನಂತಸ್ವರೂಪನಾದ ವಾಸುದೇವನ ಚರಿತ್ರೆಯನ್ನು ನಮಗೆ ತೃಪ್ತಿಯಾಗುವಂತೆ ಹೇಳಲಿಲ್ಲ. ಆದುದರಿಂದ ಅವನ ಮಹಿಮೆಯನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳುತ್ತೇವೆ ಎಂದರು.

೩. ಬ್ರಹ್ಮನು ಹೇಳಿದನು :—ಎಲೈ ಮುನಿಶ್ರೇಷ್ಠರಿರಾ, ಅನಂತವಾಸುದೇವನ ಮಹಾತ್ಮೆಯನ್ನು ಹೇಳುವೆನು ಕೇಳಿ. ಇದು ಅತ್ಯಂತ ಸಾರವತ್ತಾದುದು, ಶ್ರೇಷ್ಠವಾಗಿರುವುದು, ಲೋಕದಲ್ಲಿ ದುರ್ಲಭವಾದುದು.

ಆದಿಕಲ್ಪೇ ಪುರಾ ವಿಪ್ರಾಸ್ತ್ವಹಮವ್ಯಕ್ತಜನ್ಮವಾನ್ ।
ವಿಶ್ವಕರ್ಮಾಣಮಾಹೂಯ ವಚನಂ ಪ್ರೋಕ್ತವಾನಿದಂ ॥ ೪ ॥

ವರಿಷ್ಠಂ ದೇವಶಿಲ್ಪೀಂದ್ರಂ ಶಿಶ್ವಕರ್ಮಾಗ್ರಕರ್ಮಿಣಂ ।
ಪ್ರತಿಮಾಂ ವಾಸುದೇವಸ್ಯ ಕುರು ಶೈಲಮಯೀಂ ಭುವಿ ॥ ೫ ॥

ಯಾಂ ಪ್ರೇಕ್ಷ್ಯ ವಿಧಿವದ್ಭಕ್ತಾಃ ಸೇಂದ್ರಾ ವೈ ಮಾನುಷಾದಯಃ ।
ಯೇನ ದಾನವರಕ್ಷೋಭ್ಯೋ ವಿಜ್ಞಾಯ ಸುಮಹದ್ಭಯಂ ॥ ೬ ॥

ತ್ರಿದಿವಂ ಸಮನುಪ್ರಾಪ್ಯ ಸುಮೇರುಶಿಖರಂ ಚಿರಂ ।
ವಾಸುದೇವಂ ಸಮಾರಾಧ್ಯ ನಿರಾತಂಕಾ ವಸಂತಿ ತೇ ॥ ೭ ॥

ಮಮ ತದ್ವಚನಂ ಶ್ರುತ್ವಾ ವಿಶ್ವಕರ್ಮಾ ತು ತತ್ಕ್ಷಣಾತ್ ।
ಚಕಾರ ಪ್ರತಿಮಾಂ ಶುದ್ಧಾಂ ಶಂಖಚಕ್ರಗದಾಧರಾಂ ॥ ೮ ॥

---

೪. ಹಿಂದೆ ಆದಿಕಲ್ಪದಲ್ಲಿ ಅವ್ಯಕ್ತಜನ್ಮನಾದ ನಾನು ಒಂದುಸಾರೆ ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಸಿ ಈರೀತಿಯಾಗಿ ಹೇಳಿದೆನು. ಅವನೊಬ್ಬ ಪ್ರಭಾವಶಾಲಿಯಾದ ಶಿಲ್ಪಿಶ್ರೇಷ್ಠನು.

೫-೬. ಎಲೈ ವಿಶ್ವಕರ್ಮನೇ 'ನೀನು ಕಲ್ಲಿನಲ್ಲಿ ಒಂದು ವಾಸುದೇವನ ಮೂರ್ತಿಯನ್ನು ಮಾಡು. ಆ ಮೂರ್ತಿಯನ್ನು ನೋಡುವುದರಿಂದ ಇಂದ್ರನೇ ಮೊದಲಾದ ದೇವತೆಗಳೂ, ಮನುಷ್ಯರೂ ಭಕ್ತರಾಗಬೇಕು ಈ ವಿಗ್ರಹವನ್ನು ನೋಡಿದರೆ ದಾನವರೂ ರಾಕ್ಷಸರೂ ತುಂಬಾ ಭಯಪಡುವಂತಿರಬೇಕು.

೭. ಭಕ್ತರೆಲ್ಲರೂ ಸ್ವರ್ಗಕ್ಕೆ ಬಂದು ಸುಮೇರುಪರ್ವತದ ಶಿಖರ ದಲ್ಲಿರುವ ಆ ವಾಸುದೇವನನ್ನು ಭಕ್ತಿಯಿಂದ ಪೂಜಿಸಿದರೆ ಯಾವ ತೊಂದರೆಯೂ ಇಲ್ಲದೆ ಸುಖವಾಗಿರಬೇಕು. ಅಂತಹ ವಿಗ್ರಹವನ್ನು ಮಾಡು ಎಂದೆನು.

೮-೧೦. ನನ್ನ ಮಾತಿನಂತೆ ವಿಶ್ವಕರ್ಮನು ಆಕ್ಷಣದಲ್ಲಿಯೇ ಬಂದು ವಾಸುದೇವನ ಪ್ರತಿಮೆಯನ್ನು ಮಾಡಿದನು. ಶಂಖಚಕ್ರಗದೆಗಳನ್ನು ಧರಿಸಿರು ವಂತೆ ನಿರ್ಮಿಸಿದನು. ಆ ಪ್ರತಿಮೆಯ ಕಣ್ಣುಗಳು ಕಮಲದಂತೆ ವಿಶಾಲವಾ ಗಿದ್ದವು. ಶ್ರೀವತ್ಸಚಿಹ್ನೆಯು ಎದೆಯಮೇಲಿದ್ದಿತು. ವನಮಾಲೆಯು ಕೊರಳ

ಸರ್ವಲಕ್ಷಣಸಂಯುಕ್ತಾಂ ಪುಂಡರೀಕಾಯತೇಕ್ಷಣಾಂ ।
ಶ್ರೀವತ್ಸಲಕ್ಷ್ಮಸಂಯುಕ್ತಾಮತ್ಯುಗ್ರಾಂ ಪ್ರತಿಮೋತ್ತಮಾಂ ॥ ೯ ॥

ವನಮಾಲಾವೃತೋರಸ್ಕಾಂ ಮುಕುಟಾಂಗಧಾರಿಣೀಂ ।
ಪೀತವಸ್ತ್ರಾಂ ಸುಪೀನಾಂಸಾಂ ಕುಂಡಲಾಭ್ಯಾಮಲಂಕೃತಾಂ ॥ ೧೦ ॥

ಏವಂ ಸಾ ಪ್ರತಿಮಾ ದಿವ್ಯಾ ಗುಹ್ಯಮಂತ್ರೈಸ್ತದಾ ಸ್ವಯಂ ।
ಪ್ರತಿಷ್ಠಾಕಾಲಮಾಸಾದ್ಯ ಮಯೋಸೌ ನಿರ್ಮಿತಾ ಪುರಾ ॥ ೧೧ ॥

ತಸ್ಮಿನ್ಕಾಲೇ ತದಾ ಶಕ್ರೋ ದೇವರಾಟ್ಪ್ರೇಚರೈಃ ಸಹ ।
ಜಗಾಮ ಬ್ರಹ್ಮಸದನಮಾರುಹ್ಯ ಗಜಮುತ್ತಮಂ ॥ ೧೨ ॥

ಪ್ರಸಾದ್ಯ ಪ್ರತಿಮಾಂ ಶಕ್ರಃ ಸ್ನಾನದಾನ್ಯೈಃ ಪುನಃ ಪುನಃ ।
ಪ್ರತಿಮಾಂ ತಾಂ ಸಮಾರಾಧ್ಯ ಸ್ವಪುರಂ ಪುನರಾಗಮತ್ ॥ ೧೩ ॥

---

ನಲ್ಲಿ ಅಲಂಕೃತವಾಗಿದ್ದಿತು. ಕಿರೀಟದಿಂದ ತಲೆಯು ಶೋಭಿಸುತ್ತಿತ್ತು. ಅದಕ್ಕೆ ಹಳದಿಯ ಪೀತಾಂಬರವನ್ನು ಉಡಿಸಿದ್ದನು. ಕಿವಿಗಳಲ್ಲಿ ಕುಂಡಲಗಳು ಪ್ರಕಾಶಿಸುತ್ತಿದ್ದವು. ಎದೆಯು ತುಂಬಿಕೊಂಡು ಮನೋಹರವಾಗಿದ್ದಿತು. ಸರ್ವಲಕ್ಷಣ ಸಂಪನ್ನವಾಗಿ ಶುದ್ಧವಾಗಿದ್ದಿತು.

೧೧. ಈರೀತಿಯಾಗಿ ವಿಶ್ವಕರ್ಮನು ರಹಸ್ಯವಾದ ಮಂತ್ರಗಳಿಂದ ಪ್ರತಿಷ್ಠೆಮಾಡುವ ಕಾಲವು ಬರುವವರೆಗೂ ಆ ಪ್ರತಿಮೆಯನ್ನು ಸರ್ವಾಂಗ ಸುಂದರವಾಗಿ ನಿರ್ಮಿಸಿದನು.

೧೨. ಈ ಸಮಯಕ್ಕೆ ಸರಿಯಾಗಿ ದೇವರಾಜನಾದ ಇಂದ್ರನು ಐರಾವತ ವನ್ನೇರಿ ದೇವತೆಗಳೊಡಗೂಡಿ ಬ್ರಹ್ಮನ ಮನೆಗೆ ಬಂದನು.

೧೩. ಅಲ್ಲಿ ಬ್ರಹ್ಮನು ನಿರ್ಮಿಸಿದ ವಾಸುದೇವನ ಪ್ರತಿಮೆಯನ್ನು ನೋಡಿ ಭಕ್ತಿಯಿಂದ ಅದಕ್ಕೆ ಸ್ನಾನಮಾಡಿಸಿ ಅಲಂಕರಿಸಿ ಬಾರಿಬಾರಿಗೂ ಪೂಜಿಸಿ ಸಂತುಷ್ಟಿಪಡಿಸಿ ತನ್ನ ಊರಿಗೆ ಹಿಂತಿರುಗಿದನು.

**ತಾಂ ಸಮಾರಾಧ್ಯ ಸುಚಿರಂ ಯತವಾಕ್ಕಾಯಮಾನಸಃ ।**
**ವೃತ್ರಾದ್ಯಾನಸುರಾನ್ಕ್ರೂರಾನ್ನಮುಚಿಪ್ರಮುಖಾನ್ಸ ಚ ॥ ೧೪ ॥**

**ನಿಹತ್ಯ ದಾನವಾನ್ಸೀಮಾನ್ಭುಕ್ತವಾನ್ಭುವನತ್ರಯಂ ।**
**ದ್ವಿತೀಯೇ ಚ ಯುಗೇ ಪ್ರಾಪ್ತೇ ತ್ರೇತಾಯಾಂ ರಾಕ್ಷಸಾಧಿಪಃ ॥ ೧೫ ॥**

**ಬಭೂವ ಸುಮಹಾವೀರ್ಯೋ ದಶಗ್ರೀವಃ ಪ್ರತಾಪವಾನ್ ।**
**ದಶ ವರ್ಷಸಹಸ್ರಾಣಿ ನಿರಾಹಾರೋ ಜಿತೇಂದ್ರಿಯಃ ॥ ೧೬ ॥**

**ಚಚಾರ ವ್ರತಮತ್ಯುಗ್ರಂ ತಪಃ ಪರಮದುಶ್ಚರಂ ।**
**ತಪಸಾ ತೇನ ತುಷ್ಟೋಽಹಂ ವರಂ ತಸ್ಮೈ ಪ್ರದತ್ತವಾನ್ ॥ ೧೭ ॥**

**ಅವಧ್ಯಃ ಸರ್ವದೇವಾನಾಂ ಸ ದೈತ್ಯೋರಗರಕ್ಷಸಾಂ ।**
**ಶಾಪಪ್ರಹರಣೈರುಗ್ರೈರವಧ್ಯೋ ಯಮಕಿಂಕರೈಃ ॥ ೧೮ ॥**

---

೧೪. ಇಂದ್ರನು ಆ ಪ್ರತಿಮೆಯನ್ನು ಮನೋವಾಕ್ಕಾಯಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿದನು. ಆದುದರಿಂದ ಅವನು ವೃತ್ರಾಸುರ, ನಮುಚಿ ಮುಂತಾದ ಕ್ರೂರರಾದ ದಾನವರನ್ನು ಕೊಂದು ಮೂರು ಲೋಕಕ್ಕೂ ಒಡೆಯನಾದನು.

೧೫-೧೬. ತ್ರೇತಾಯುಗವು ಬರಲು ದಶಕಂಠನೆಂಬ ಒಬ್ಬ ರಾಕ್ಷಸನು ಹುಟ್ಟಿದನು. ಆವನು ಮಹಾಬಲಶಾಲಿಯಾಗಿಯೂ ರಾಕ್ಷಸಾಧಿಪತಿಯಾಗಿಯೂ ಇದ್ದನು. ಅವನು ಹತ್ತುಸಹಸ್ರವರ್ಷಗಳವರೆಗೆ ಆಹಾರವನ್ನೂ ಸಹ ತೆಗೆದು ಕೊಳ್ಳದೆ ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನು.

೧೭-೧೮. ಅವನು ಆಚರಿಸಿದ ತಪಸ್ಸಿನಿಂದ ಸಂತುಷ್ಟನಾದ ನಾನು ನಿನಗ ದೇವತೆಗಳಿಂದಾಗಲೀ, ದೈತ್ಯ, ಸರ್ಪ, ರಾಕ್ಷಸ, ಮುಂತಾದುವರಿಂದ ಲಾಗಲೀ ಮರಣವಾಗಬಾರದು. ಶಾಪ, ಪ್ರಹಾರ, ಮುಂತಾದುವುಗಳಿಂದ ಲಾಗಲೀ ಯಾವ ಯಮಕಿಂಕರಿಂದಾಗಲೀ ನಿನಗೆ ಮರಣವಾಗಬಾರದು. ಎಂದು ವರವನ್ನು ಕೊಟ್ಟೆನು.

ವರಂ ಪ್ರಾಪ್ಯಂ ತದಾ ರಕ್ಷೋ ಯಕ್ಷಾನ್ಸರ್ವಗಣಾನಿಮಾ ।
ಧನಾಧ್ಯಕ್ಷಂ ವಿನಿರ್ಜಿತ್ಯ ಶಕ್ರಂ ಜೇತುಂ ಸಮುದ್ಯತಃ ॥ ೧೯ ॥

ಸಂಗ್ರಾಮಂ ಸುಮಹಾಘೋರಂ ಕೃತ್ವಾ ದೇವೈಃ ಸ ರಾಕ್ಷಸಃ ।
ದೇವರಾಜಂ ವಿನಿರ್ಜಿತ್ಯ ತದಾ ಇಂದ್ರಜಿತೇತಿ ವೈ ॥ ೨೦ ॥

ರಾಕ್ಷಸಸ್ತತ್ಸುತೋ ನಾಮ ಮೇಘನಾದಃ ಪ್ರಲಬ್ಧವಾನ್ ।
ಅಮರಾವತೀಂ ತತಃ ಪ್ರಾಪ್ಯ ದೇವರಾಜಗೃಹೇ ಶುಭೇ ॥ ೨೧ ॥

ದದರ್ಶಾಂಜನಸಂಕಾಶಾಂ ರಾವಣಸ್ತು ಬಲಾನ್ವಿತಃ ।
ಪ್ರತಿಮಾಂ ವಾಸುದೇವಸ್ಯ ಸರ್ವಲಕ್ಷಣಸಂಯುತಾಂ ॥ ೨೨ ॥

ಶ್ರೀವತ್ಸಲಕ್ಷ್ಮಸಂಯುಕ್ತಾಂ ಪದ್ಮಪತ್ರಾಯತೇಕ್ಷಣಾಂ ।
ವನಮಾಲಾವೃತೋರಸ್ಕಾಂ ಮುಕುಟಾಂಗದಭೂಷಿತಾಂ ॥ ೨೩ ॥

ಶಂಖಚಕ್ರಗದಾಹಸ್ತಾಂ ಪೀತವಸ್ತ್ರಾಂ ಚತುರ್ಭುಜಾಂ ।
ಸರ್ವಾಭರಣಸಂಯುಕ್ತಾಂ ಸರ್ವಕಾಮಫಲಪ್ರದಾಂ ॥ ೨೪ ॥

---

೧೯. ಈರೀತಿ ವರವನ್ನು ಪಡೆದುಕೊಂಡು ಆ ದಶಕಂಠನು ಯಕ್ಷಗಣಗಳನ್ನೆಲ್ಲಾ ಜಯಿಸಿದನು. ಕುಬೇರನನ್ನೂ ಜಯಿಸಿ ಇಂದ್ರನನ್ನು ಜಯಿಸಲು ಸಿದ್ಧನಾದನು.

೨೦. ಅದಕ್ಕೋಸ್ಕರ ದೇವತೆಗಳೊಡನೆ ಘೋರವಾದ ಯುದ್ಧಮಾಡಿ ಇಂದ್ರನನ್ನು ಜಯಿಸಿದನು.

೨೧-೨೨. ತನ್ನ ಮಗನಾದ ಮೇಘನಾದನೊಡಗೂಡಿ ಅಮರಾವತಿಗೆ ನುಗ್ಗಿದನು. ಅಲ್ಲಿದ್ದ ಇಂದ್ರನ ಮನೆಯಲ್ಲಿ ರಾವಣನು ಸರ್ವಲಕ್ಷಣ ಸಂಪನ್ನವಾದ ವಾಸುದೇವನ ಪ್ರತಿಮೆಯನ್ನು ನೋಡಿದನು.

೨೩-೨೪. ಆ ಪ್ರತಿಮೆಯು ಶ್ರೀವತ್ಸಚಿಹ್ನೆಯಿಂದ ಶೋಭಿಸುತ್ತಿತ್ತು. ಕಮಲವಂತೆ ವಿಶಾಲವಾದ ಕಣ್ಣುಗಳಿದ್ದವು. ವಕ್ಷಃಸ್ಥಳದಲ್ಲಿ ವನಮಾಲೆಯು ರಾಜಿಸುತ್ತಿತ್ತು. ಕಿರೀಟದಿಂದಲೂ, ಭುಜಕೀರ್ತಿಗಳಿಂದಲೂ ಆ ಪ್ರತಿಮೆಯು ಮನೋಹರವಾಗಿದ್ದಿತು. ನಾಲ್ಕು ಕೈಗಳಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳು ಶೋಭಿಸುತ್ತಿದ್ದವು. ಎಲ್ಲಾವಿಧವಾದ ಆಭರಣಗಳಿಂದ ಕೂಡಿ ಆ ವಾಸುದೇವಮೂರ್ತಿಯು ಸರ್ವಜನಮೋಹಕವಾಗಿದ್ದಿತು.

ಪಿಹಾಯ ರತ್ನಸಂಘಾಂಶ್ಚ ಪ್ರತಿಮಾಂ ಶುಭಲಕ್ಷಣಾಂ ।
ಪುಷ್ಪಕೇಣ ಪಿಮಾನೇನ ಲಂಕಾಂ ಪ್ರಾಸ್ಥಾಪಯದ್ದ್ರುತಂ ॥ ೨೫ ॥

ಪುರಾಧ್ಯಕ್ಷಃ ಸ್ಥಿತಃ ಶ್ರೀಮಾನ್ಧರ್ಮಾತ್ಮಾ ಸ ವಿಭೀಷಣಃ ।
ರಾವಣಸ್ಯಾನುಜೋ ಮಂತ್ರೀ ನಾರಾಯಣಪರಾಯಣಃ ॥ ೨೬ ॥

ದೃಷ್ಟ್ವಾ ತಾಂ ಪ್ರತಿಮಾಂ ದಿವ್ಯಾಂ ದೇವೇಂದ್ರಭವನಚ್ಯುತಾಂ ।
ರೋಮಾಂಚಿತತನುರ್ಭೂತ್ವಾ ವಿಸ್ಮಯಂ ಸಮುಪದ್ಯತ ॥ ೨೭ ॥

ಪ್ರಣಮ್ಯ ಶಿರಸಾ ದೇವಂ ಪ್ರಹೃಷ್ಟೇನಾಂತರಾತ್ಮನಾ ।
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ॥ ೨೮ ॥

ಇತ್ಯುಕ್ತ್ವಾ ಸ ತು ಧರ್ಮಾತ್ಮಾ ಪ್ರಣಿಪತ್ಯ ಮುಹುರ್ಮುಹುಃ ।
ಜ್ಯೇಷ್ಠಂ ಭ್ರಾತರಮಾಸಾದ್ಯ ಕೃತಾಂಜಲಿರಭಾಷತ ॥ ೨೯ ॥

---

೨೫. ಸರ್ವೇಷ್ಟಾರ್ಥಗಳನ್ನು ನೆರವೇರಿಸುವ ಆ ಪ್ರತಿಮೆಯನ್ನು ನೋಡಿ ಎಷ್ಟೋ ರತ್ನಸಮೂಹಗಳಿದ್ದರೂ ಸಹ ಅದನ್ನು ಬಿಟ್ಟುಬಿಟ್ಟು, ವಾಸುದೇವನ ಪ್ರತಿಮೆಯನ್ನು ಪುಷ್ಪಕವಿಮಾನದಲ್ಲಿರಿಸಿಕೊಂಡು ಲಂಕೆಗೆ ಹೋದನು.

೨೬. ಅಲ್ಲಿ ರಾವಣನ ತಮ್ಮನೂ, ಲಂಕೆಗೆ ಅಧ್ಯಕ್ಷನೂ, ಮಂತ್ರಿಯೂ ಆದ ವಿಭೀಷಣನು ವಾಸುದೇವನ ಪ್ರತಿಮೆಯನ್ನು ನೋಡಿದನು. ಅವನು ಮಹಾವಿಷ್ಣುಭಕ್ತನು.

೨೭-೨೮. ಪ್ರತಿಮೆಯನ್ನು ದೇವೇಂದ್ರನ ಗೃಹದಿಂದ ತಂದುದೆಂದು ಕೇಳಿ ರೋಮಾಂಚಿತನಾದನು. ಹಾಗೂ ಆಶ್ಚರ್ಯದಿಂದ ಅದನ್ನು ನೋಡುತ್ತಾ ಭಕ್ತಿಯಿಂದ ನಮಸ್ಕರಿಸಿದನು. 'ಇಂದಿಗೆ ನನ್ನ ಜನ್ಮವು ಸಾರ್ಥಕವಾಯಿತು. ನನ್ನ ತಪಸ್ಸಿಗೆ ಸಾಫಲ್ಯವು ದೊರೆಯಿತು' ಎಂದು ಹೇಳುತ್ತಾ ಬಾರಿಬಾರಿಗೂ ಧ್ಯಾನಿಸಿ ನಮಸ್ಕರಿಸಿದನು.

೨೯-೩೦. ಆಮೇಲೆ ತನ್ನ ಅಣ್ಣನಾದ ರಾವಣನ ಸಮೀಪಕ್ಕೆ ಹೋಗಿ ಅಂಜಲಿಬದ್ಧನಾಗಿ ರಾಜನೇ, ಈ ಪ್ರತಿಮೆಯನ್ನು ನನಗೆ ಕೊಟ್ಟು ಅನುಗ್ರಹಿಸು.

ರಾಜನ್ಪ್ರತಿಮಯಾ ತ್ವಂ ಮೇ ಪ್ರಸಾದಂ ಕರ್ತುಮರ್ಹಸಿ ।
ಯಾಮಾರಾಧ್ಯ ಜಗನ್ನಾಥ ನಿಸ್ತರೇಯಂ ಭವಾರ್ಣವಂ ॥ ೩೦ ॥

ಭ್ರಾತುರ್ವಚನಮಾಕರ್ಣ್ಯ ರಾವಣಸ್ತಂ ತದಾಬ್ರವೀತ್ ।
ಗೃಹಾಣ ಪ್ರತಿಮಾಂ ವೀರ ತ್ವನಯಾ ಕಿಂ ಕರೋಮ್ಯಹಂ ॥ ೩೧ ॥

ಸ್ವಯಂಭುವಂ ಸಮಾರಾಧ್ಯ ತ್ರೈಲೋಕ್ಯಂ ವಿಜಯೇ ತ್ವಹಂ ।
ನಾನಾಶ್ಚರ್ಯಮಯಂ ದೇವಂ ಸರ್ವಭೂತಭವೋದ್ಭವಂ ॥ ೩೨ ॥

ವಿಭೀಷಣೋ ಮಹಾಬುದ್ಧಿಸ್ತದಾ ತಾಂ ಪ್ರತಿಮಾಂ ಶುಭಾಂ ।
ಶತಮಷ್ಟೋತ್ತರಂ ಚಾಬ್ದಂ ಸಮಾರಾಧ್ಯ ಜನಾರ್ದನಂ ॥ ೩೩ ॥

ಅಜರಾಮರಣಂ ಪ್ರಾಪ್ತಮಣಿಮಾದಿಗುಣೈರ್ಯುತಂ ।
ರಾಜ್ಯಂ ಲಂಕಾಧಿಪತ್ಯಂ ಚ ಭೋಗಾನ್ಭುಙ್ಕ್ತೇ ಯಥೇಪ್ಸಿತಾನ್ ॥ ೩೪ ॥

---

ಈ ಪ್ರತಿಮೆಯದ್ನು ಪೂಜಿಸಿ ಸಂಸಾರದಿಂದ ಮುಕ್ತಿಯನ್ನು ಹೊಂದುವೆನು. ಎಂದು ಹೇಳಿದನು.

೩೧. ತಮ್ಮನ ಮಾತನ್ನು ಕೇಳಿ ರಾವಣನು ' ನೀನು ಪ್ರತಿಮೆಯನ್ನು ತೆಗೆದುಕೋ. ಇದರಿಂದ ನನಗೇನೂ ಪ್ರಯೋಜನತಿಲ್ಲ. ನಾನು ಪರಮೇಶ್ವರನನ್ನು ಪೂಜಿಸಿ ತ್ರಿಲೋಕವನ್ನು ಜಯಿಸಿರುವೆನು. ' ಎಂದು ಹೇಳಿದನು.

೩೨-೩೪. ಮಹಾಪ್ರಾಜ್ಞನಾದ ವಿಭೀಷಣನು ಮಂಗಳಕರವಾದ ಆ ವಾಸುದೇವನ ಪ್ರತಿಮೆಯನ್ನು ತೆಗೆದುಕೊಂಡನು. ನೂರೆಂಟುವರ್ಷಗಳಕಾಲ ಜನಾರ್ದನನನ್ನು ಪೂಜಿಸಿ ಸಾವುಮುಪ್ಪುಗಳಿಲ್ಲದವನಾದನು. ಅಣಿಮಾದಿ ಅಷ್ಟೈಶ್ವರ್ಯಗಳೂ ಉಂಟಾದವು. ಲಂಕಾರಾಜ್ಯವು ಸಿಕ್ಕಿತು. ಅನೇಕ ಭೋಗಗಳನ್ನನುಭವಿಸಿದನು.

॥ ಮುನಯ ಊಚುಃ ॥

ಅಹೋ ನೋ ವಿಸ್ಮಯೋ ಜಾತಃ ಶ್ರುತ್ವೇದಂ ಪರಮಾಮೃತಂ ।
ಅನಂತವಾಸುದೇವಸ್ಯ ಸಂಭವಂ ಭುವಿ ದುರ್ಲಭಂ ॥ ೩೫ ॥

ಶ್ರೋತುಮಿಚ್ಛಾಮಹೇ ದೇವ ವಿಸ್ತರೇಣ ಯಥಾತಥಂ ।
ತಸ್ಯ ದೇವಸ್ಯ ಮಾಹಾತ್ಮ್ಯಂ ವಕ್ತುಮರ್ಹಸ್ಯಶೇಷತಃ ॥ ೩೬ ॥

॥ ಬ್ರಹ್ಮೋವಾಚ ॥

ತದಾ ಸ ರಾಕ್ಷಸಃ ಕ್ರೂರೋ ದೇವಗಂಧರ್ವಕಿಂನರಾನ್ ।
ಲೋಕಪಾಲಾನ್ಮನುಜಾನ್ಮುನಿಸಿದ್ಧಾಂಶ್ಚ ಪಾಪಕೃತ್ ॥ ೩೭ ॥

ವಿಜಿತ್ಯ ಸಮರೇ ಸರ್ವಾನಾಜಹಾರ ತದಂಗನಾಃ ।
ಸಂಸ್ಥಾಪ್ಯ ನಗರೀಂ ಲಂಕಾಂ ಪುನಃ ಸೀತಾರ್ಥಮೋಹಿತಃ ॥ ೩೮ ॥

ಶಂಕಿತೋ ಮೃಗರೂಪೇಣ ಸೌವರ್ಣೇನ ಚ ರಾವಣಃ ।
ತತಃ ಕ್ರುದ್ಧೇನ ರಾಮೇಣ ರಣೇ ಸೌಮಿತ್ರಿಣಾ ಸಹ ॥ ೩೯ ॥

---

೩೫-೩೬. ಋಷಿಗಳು ಕೇಳಿದರು :—ಎಲೈ ದೇವನೇ, ಭೂಲೋಕದಲ್ಲಿ ದುರ್ಲಭವಾದ ಅನಂತವಾಸುದೇವನ ಅಮೃತಕ್ಕೆ ಸಮನಾದ ಚರಿತ್ರೆಯನ್ನು ಕೇಳಿ ನಮಗೆ ತುಂಬಾ ಆಶ್ಚರ್ಯವಾಗಿದೆ. ಅವನ ಮಹಾತ್ಮೆಯನ್ನೇ ಇನ್ನೂ ವಿಸ್ತಾರವಾಗಿ ಕೇಳಬೇಕೆಂದಿರುವೆವು ಎನ್ನಲು

೩೭. ಬ್ರಹ್ಮನು ಹೇಳಿದನು :—ಅನಂತರ ಆ ಕ್ರೂರನಾದ ರಾವಣನು ದೇವತೆಗಳು, ಗಂಧರ್ವರು, ಕಿನ್ನರರು, ಲೋಕಪಾಲಕರು, ಮನುಜರು, ಮುನಿಗಳು, ಸಿದ್ಧರು. ಇವರುಗಳನ್ನೆಲ್ಲಾ ರಣಾಂಗಣದಲ್ಲಿ ಸೋಲಿಸಿ ಅವರ ಸ್ತ್ರೀಯರುಗಳನ್ನೆಲ್ಲಾ ಅಪಹರಿಸಿಕೊಂಡು ಬಂದು ಲಂಕೆಯಲ್ಲಿರಿಸಿದನು.

೩೮-೩೯. ಸೀತೆಯ ಸೌಂದರ್ಯವನ್ನು ಕೇಳಿ ಅವಳಲ್ಲಿ ಮೋಹಿತನಾದನು. ಅವಳನ್ನು ಅಪಹರಿಸಲು ಸುವರ್ಣಮೃಗರೂಪದ ಮೂಲಕವಾಗಿ

ರಾವಣಸ್ಯ ವಧಾರ್ಥಾಯ ಹತ್ವಾ ವಾಲಿಂ ಮನೋಜವಂ ।
ಅಭಿಷಿಕ್ತಶ್ಚ ಸುಗ್ರೀವೋ ಯುವರಾಜೋಽಂಗದಸ್ತಥಾ ॥ ೪೦ ॥

ಹನುಮಾನ್ನಲನೀಲಶ್ಚ ಜಾಂಬವಾನ್ಪನಸಸ್ತಥಾ ।
ಗವಯಶ್ಚ ಗವಾಕ್ಷಶ್ಚ ಪಾಠೀನಃ ಪರಮೌಜಸಃ ॥ ೪೧ ॥

ಏತೈಶ್ಚಾನ್ಯೈಶ್ಚ ಬಹುಭಿರ್ವಾನರೈಃ ಸಮಹಾಬಲೈಃ ।
ಸಮಾವೃತೋ ಮಹಾಘೋರೈ ರಾಮೋ ರಾಜೀವಲೋಚನಃ ॥ ೪೨ ॥

ಗಿರೀಣಾಂ ಸರ್ವಸಂಘಾತೈಃ ಸೇತುಂ ಬದ್ಧ್ವಾ ಮಹೋದಧೌ ।
ಬಲೇನ ಮಹತಾ ರಾಮಃ ಸಮುತ್ತೀರ್ಯ ಮಹೋದಧಿಂ ॥ ೪೩ ॥

ಸಂಗ್ರಾಮಮತುಲಂ ಚಕ್ರೇ ರಕ್ಷೋಗಣಸಮನ್ವಿತಃ ।
ಯಮಹಸ್ತಂ ಪ್ರಹಸ್ತಂ ಚ ನಿಕುಂಭಂ ಕುಂಭಮೇವ ಚ ॥ ೪೪ ॥

ನರಾಂತಕಂ ಮಹಾವೀರ್ಯಂ ತಥಾ ಚೈವ ಯಮಾಂತಕಂ ।
ಮಾಲಾಢ್ಯಂ ಮಾಲಿಕಾಢ್ಯಂ ಚ ಹತ್ವಾ ರಾಮಸ್ತು ವೀರ್ಯವಾ‌ನ್ ॥ ೪೫ ॥

---

ರಾಮನನ್ನು ಬೇರೆಮಾಡಿ ಸೀತೆಯನ್ನು ಅಪಹರಿಸಿದನು. ಅದರಿಂದ ಅತಿ ಕೋಪಗೊಂಡು ರಾಮನು ಲಕ್ಷ್ಮಣನೊಡಗೂಡಿ ರಾವಣನ ವಧೆಗೆ ಹೊರಟನು.

೪೦. ದಾರಿಯಲ್ಲಿ ವಾಲಿಯನ್ನು ಸಂಹರಿಸಿ ಸುಗ್ರೀವನನ್ನು ಕಿಷ್ಕಿಂಧೆಯ ರಾಜನನ್ನಾಗಿಯೂ ಅಂಗದನನ್ನು ಯುವರಾಜನನ್ನಾಗಿಯೂ ಮಾಡಿದನು.

೪೧-೪೨. ಹನುಮಂತ, ನೀಲ, ಜಾಂಬವ, ಪನಸ, ಗವಯ, ಗವಾಕ್ಷ, ಪಾಠೀನ, ಇವರೇ ಮುಂತಾದ ಮಹಾಪರಾಕ್ರಮಿಗಳಾದ ವಾನರರೊಡನೆ ಕೂಡಿ ರಾಮನು ಲಂಕೆಗೆ ಹೋದನು.

೪೩. ಪರ್ವತ ಮುಂತಾದುವುಗಳಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿ ಸೇತುವೆಯ ಮೂಲಕವಾಗಿ ಸಮುದ್ರವನ್ನು ದಾಟಿದನು. ಅಲ್ಲಿ ರಾಕ್ಷಸ ಗಣಗಳೊಡನೆ ಭಯಂಕರವಾಗಿ ಯುದ್ಧವನ್ನು ಮಾಡಿದನು.

೪೪-೪೫. ಯುದ್ಧದಲ್ಲಿ ಯಮಹಸ್ತ, ಪ್ರಹಸ್ತ, ನಿಕುಂಭ, ಕುಂಭ, ನರಾಂತಕ, ಮಹಾಶೌರ್ಯಶಾಲಿಯಾದ ಯಮಾಂತಕ, ಮಾಲಾಢ್ಯ, ಮಾಲಿಕಾಢ್ಯ ಇವರೇ ಮುಂತಾದವರನ್ನು ಕೊಂದನು.

ಪುನರಿಂದ್ರಜಿತಂ ಹತ್ವಾ ಕುಂಭಕರ್ಣಂ ಸರಾವಣಂ ।
ವೈದೇಹೀಂ ಚಾಗ್ನಿನಾಶೋಧ್ಯ ದತ್ತ್ವಾ ರಾಜ್ಯಂ ವಿಭೀಷಣೇ ॥ ೪೬ ॥

ವಾಸುದೇವಂ ಸಮಾದಾಯ ಯಾನಂ ಪುಷ್ಪಕಮಾರುಹತ್ ।
ಲೀಲಯಾ ಸಮನುಪ್ರಾಪದಯೋಧ್ಯಾಂ ಪೂರ್ವಪಾಲಿತಾಂ ॥ ೪೭ ॥

ಕನಿಷ್ಠಂ ಭರತಂ ಸ್ನೇಹಾಚ್ಛತ್ರುಘ್ನಂ ಭಕ್ತವತ್ಸಲಃ ।
ಅಭಿಷಿಚ್ಯ ತದಾ ರಾಮಃ ಸರ್ವರಾಜ್ಯೇಽಧಿರಾಜವತ್ ॥ ೪೮ ॥

ಪುರಾತನೀಂ ಸ್ವಮೂರ್ತಿಂ ಚ ಸಮಾರಾಧ್ಯ ತತೋ ಹರಿಃ ।
ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ॥ ೪೯ ॥

ಭುಕ್ತ್ವಾ ಸಾಗರಪರ್ಯಂತಾಂ ಮೇದಿನೀಂ ಸ ತು ರಾಘವಃ ।
ರಾಜ್ಯಮಾಸಾದ್ಯ ಸುಗತಿಂ ವೈಷ್ಣವಂ ಪದಮಾವಿಶತ್ ॥ ೫೦ ॥

ತಾಂ ಚಾಪಿ ಪ್ರತಿಮಾಂ ರಾಮಃ ಸಮುದ್ರೇಶಾಯ ದತ್ತವಾನ್ ।
ಧನ್ಯೋ ರಕ್ಷಯಿತಾಸಿ ತ್ವಂ ತೋಯರತ್ನಸಮನ್ವಿತಃ ॥ ೫೧ ॥

---

೪೬. ರಾವಣ, ಇಂದ್ರಜಿತು, ಕುಂಭಕರ್ಣ, ಮುಂತಾದವರನ್ನೆಲ್ಲಾ ಯುದ್ಧದಲ್ಲಿ ಕೊಂದು ಸೀತೆಯನ್ನು ಅಗ್ನಿಪ್ರವೇಶದಿಂದ ಪವಿತ್ರಳೆಂದು ತಿಳಿದು ಅವಳನ್ನು ಪರಿಗ್ರಹಿಸಿದನು. ಲಂಕಾರಾಜ್ಯವನ್ನು ವಿಭೀಷಣನಿಗೆ ಕೊಟ್ಟು ಅಲ್ಲಿದ್ದ ವಾಸುದೇವ ಮೂರ್ತಿಯನ್ನು ತೆಗೆದುಕೊಂಡು ಪುಷ್ಪಕವಿಮಾನವನ್ನು ಹತ್ತಿದನು.

೪೭–೪೮. ಅಯೋಧ್ಯೆಗೆ ಹೋಗಿ ತನ್ನ ಚಿಕ್ಕ ತಮ್ಮನಾದ ಭರತನನ್ನೂ ಶತ್ರುಘ್ನನನ್ನೂ ರಾಜ್ಯದಲ್ಲಿ ಅಭಿಷೇಕಮಾಡಿ ಅಧಿರಾಜನಂತೆ ಇರುತ್ತಿದ್ದನು.

೪೯-೫೦. ತಾನು ತಂದಿರುವ ವಾಸುದೇವಮೂರ್ತಿಯನ್ನು ಪೂಜಿಸುತ್ತಾ ಹನ್ನೊಂದುಸಾವಿರವರ್ಷಗಳವರೆಗೂ ಚತುಃಸಮುದ್ರಪರ್ಯಂತವಾದ ಭೂಮಿಯನ್ನು ಪರಿಪಾಲಿಸುತ್ತಾ ಕೊನೆಗೆ ಉತ್ತಮವಾದ ವೈಷ್ಣವಗತಿಯನ್ನು ಪಡೆದನು.

೫೧. ರಾಮನು ಆ ಪ್ರತಿಮೆಯನ್ನು ಸಮುದ್ರರಾಜನಿಗೆ ಕೊಟ್ಟನು. ಎಲೈ ಸಮುದ್ರನೇ, ನೀರು, ರತ್ನಗಳಿಂದ ಕೂಡಿರುವ ನೀನೇ ಧನ್ಯನು.

ದ್ವಾಪರಂ ಯುಗಮಾಸಾದ್ಯ ಯದಾ ದೇವೋ ಜಗತ್ಪತಿಃ ।
ಧರಣ್ಯಾಶ್ಚಾನುರೋಧೇನ ಭಾವಶೈಥಿಲ್ಯಕಾರಣಾತ್ ॥ ೫೨ ॥

ಅವತೀರ್ಣಃ ಸ ಭಗವಾನ್ವಸುದೇವಕುಲೇ ಪ್ರಭುಃ ।
ಕಂಸಾದೀನಾಂ ವಧಾರ್ಥಾಯ ಸಂಕರ್ಷಣಸಹಾಯವಾನ್ ॥ ೫೩ ॥

ತದಾ ತಾಂ ಪ್ರತಿಮಾಂ ವಿಪ್ರಾಃ ಸರ್ವಕಾಂಭಾಫಲಪ್ರದಾಂ ।
ಸರ್ವಲೋಕಹಿತಾರ್ಥಾಯ ಕಸ್ಯಚಿತ್ಕಾರಣಾಂತರೇ ॥ ೫೪ ॥

ತಸ್ಮಿನ್ಕ್ಷೇತ್ರವರೇ ಪುಣ್ಯೇ ದುರ್ಲಭೇ ಪುರುಷೋತ್ತಮೇ ।
ಉಜ್ಜಹಾರ ಸ್ವಯಂ ತೋಯಾತ್ಸಮುದ್ರಃ ಸರಿತಾಂ ಪತಿಃ ॥ ೫೫ ॥

ತದಾ ಪ್ರಭೃತಿ ತತ್ರೈವ ಕ್ಷೇತ್ರೇ ಮುಕ್ತಿಪ್ರದೇ ದ್ವಿಜಾಃ ।
ಆಸ್ತೇ ಸ ದೇವೋ ದೇವಾನಾಂ ಸರ್ವಕಾಮಫಲಪ್ರದಃ ॥ ೫೬ ॥

---

೫೨. ದ್ವಾಪರಯುಗದಲ್ಲಿ ಧರ್ಮವು ನಾಶವಾಗುತ್ತಿರಲು ಪೃಥಿವಿಯ ಮಾತಿನಂತೆ ಅವಳನ್ನು ಉದ್ಧರಿಸಲು ಪರಮಾತ್ಮನು ವಸುದೇವನ ಮನೆಯಲ್ಲಿ ಅವತರಿಸಿದನು.

೫೩-೫೫. ಕಂಸನೇ ಮೊದಲಾದ ದುಷ್ಟರ ನಾಶಕ್ಕೋಸ್ಕರವಾಗಿ ಬಲರಾಮನೊಡನೆ ಅವತರಿಸಿದ ಸಮಯದಲ್ಲಿ ಸಮುದ್ರನು ಯಾವುದೋ ಕಾರಣಕ್ಕೋಸ್ಕರವಾಗಿಯೋ ಲೋಕಹಿತಕ್ಕೋಸ್ಕರವಾಗಿಯೋ ತನ್ನಲ್ಲಿದ್ದ ಆ ವಾಸುದೇವನ ಪ್ರತಿಮೆಯನ್ನು ಪುಣ್ಯತಮವಾದ ದ್ವಾರಕೆಯಲ್ಲಿ ಹಾಕಿದನು.

೫೬. ಎಲೈ ಋಷಿಗಳಿರಾ, ಅಂದಿನಿಂದ ಆ ದೇವದೇವನಾದ ವಾಸುದೇವನು ಮುಕ್ತಿದಾಯಕವಾದ ದ್ವಾರಕೆಯಲ್ಲಿ ನೆಲಸಿರುವನು. ಅವನು ಭಕ್ತರ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುವನು.

ಯೇ ಸಂಶ್ರಯಂತಿ ಚಾನಂತಂ ಭಕ್ತ್ಯಾ ಸರ್ವೇಶ್ವರಂ ಪ್ರಭುಂ ।
ವಾಙ್ಮನಃಕರ್ಮಭಿರ್ನಿತ್ಯಂ ತೇ ಯಾಂತಿ ಪರಮಂ ಪದಂ ॥ ೫೭ ॥

ದೃಷ್ಟ್ವಾನಂತಂ ಸಕೃದ್ಭಕ್ತ್ಯಾ ಸಂಪೂಜ್ಯ ಪ್ರಣಿಪತ್ಯ ಚ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ದಶಗುಣಂ ಲಭೇತ್ ॥ ೫೮ ॥

ಸರ್ವಕಾಮಸಮೃದ್ಧೇನ ಕಾಮಗೇನ ಸುವರ್ಚಸಾ ।
ವಿಮಾನೇನಾರ್ಕವರ್ಣೇನ ಕಿಂಕಿಣೀಜಾಲಮಾಲಿನಾ ॥ ೫೯ ॥

ತ್ರಿಃಸಪ್ತಕುಲಮುದ್ಧೃತ್ಯ ದಿವ್ಯಸ್ತ್ರೀಗಣಸೇವಿತಃ ।
ಉಪಗೀಯಮಾನೋ ಗಂಧರ್ವೈರ್ನರೋ ವಿಷ್ಣುಪುರಂ ವ್ರಜೇತ್ ॥ ೬೦ ॥

ತತ್ರ ಭುಕ್ತ್ವಾ ವರಾನ್ಭೋಗಾನ್ ಜರಾಮರಣವರ್ಜಿತಃ ।
ದಿವ್ಯರೂಪಧರಃ ಶ್ರೀಮಾನ್ಯಾವದಾಭೂತಸಂಪ್ಲವಂ ॥ ೬೧

---

೫೭. ಸರ್ವೇಶ್ವರನೂ, ಅನಂತನೂ, ಆದ ವಾಸುದೇವನನ್ನು ಯಾರು ಮನೋವಾಕ್ಕಾಯಗಳಿಂದ ಸೇವಿಸುವರೋ ಅವರು ಪರಮಪದವನ್ನು ಹೊಂದುವರು.

೫೮. ಯಾರು ವಾಸುದೇವನನ್ನು ನೋಡಿ ಒಂದುಸಾರಿಯಾದರೂ ಪೂಜಿಸಿ ನಮಿಸುವರೋ, ಅವರು ರಾಜಸೂಯ, ಅಶ್ವಮೇಧಗಳಿಂದ ಬರುವ ಫಲಕ್ಕಿಂತ ನೂರುಪಾಲು ಹೆಚ್ಚಾಗಿ ಫಲವನ್ನು ಅನುಭವಿಸುವರು.

೫೯-೬೦. ಅನಂತನನ್ನು ಭಕ್ತಿಯಿಂದ ಪೂಜಿಸಿದವನು ಅವನ ಅನುಗ್ರಹದಿಂದ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುವನು. ಆ ವಿಮಾನವು ರಮ್ಯವಾಗಿಯೂ ಸೂರ್ಯನಂತೆ ಪ್ರಕಾಶಮಾನವಾಗಿಯೂ, ಇಚ್ಛೆಬಂದೆಡೆಗೆ ಹೋಗುವುದಾಗಿಯೂ ಇರುವುದು. ಅದಕ್ಕೆ ಚಿಕ್ಕ ಚಿಕ್ಕ ಗಂಟೆಗಳನ್ನು ಕಟ್ಟಿರುವರು. ದೇವತಾಸ್ತ್ರೀಯರು ಅಕ್ಕಪಕ್ಕಗಳಲ್ಲಿ ನಿಂತು ಸೇವಿಸುವರು; ಗಂಧರ್ವರು ಗೀತವನ್ನು ಹಾಡುವರು.

೬೧. ಅಲ್ಲಿ ಉತ್ತಮವಾದ ಸುಖವನ್ನನುಭವಿಸಿ ಮುಪ್ಪುಸಾವುಗಳಿಲ್ಲದವನಾಗಿ ಉತ್ತಮವಾದ ರೂಪವನ್ನು ಧರಿಸಿ ಸುಖಿಸುವನು.

ಪುಣ್ಯಕ್ಷಯಾದಿಹಾಯಾತಶ್ಚತುರ್ವೇದೀ ದ್ವಿಜೋತ್ತಮಃ ।
ವೈಷ್ಣವಂ ಯೋಗಮಾಸ್ಥಾಯ ತತೋ ಮೋಕ್ಷಮವಾಪ್ನುಯಾತ್ ॥ ೬೨ ॥

ಏವಂ ಮಯಾ ತ್ವನಂತೋಽಸೌ ಕೀರ್ತಿತೋ ಮುನಿಸತ್ತಮಾಃ ।
ಕಃ ಶಕ್ನೋತಿ ಗುಣಾನ್ವಕ್ತುಂ ತಸ್ಯ ವರ್ಷಶತೈರಪಿ ॥ ೬೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಸ್ವಯಂಭ್ವೃಷಿಸಂವಾದೇಽ-
ನಂತವಾಸುದೇವಮಾಹಾತ್ಮ್ಯನಿರೂಪಣಂ ನಾಮ ಷಟ್ಸಪ್ತ-
ತ್ಯಧಿಕಶತತಮೋಽಧ್ಯಾಯಃ

---

೬೨. ಪುಣ್ಯವೆಲ್ಲವೂ ನಾಶವಾದಬಳಿಕ ಪುನಃ ಭೂಮಿಯಲ್ಲಿ ಚತುರ್ವೇದಪಾರಂಗತನಾದ ಬ್ರಾಹ್ಮಣನಾಗಿ ಜನಿಸಿ ವೈಷ್ಣವಯೋಗವನ್ನು ಹೊಂದಿ ಮೋಕ್ಷವನ್ನು ಪಡೆಯುವನು.

೬೩. ಎಲೈ ಋಷಿಗಳಿರಾ, ನಾನು ಈರೀತಿಯಾಗಿ ಅನಂತನ ಗುಣವನ್ನು ವರ್ಣಿಸಿರುವೆನು. ಆ ಮಹಾಮಹಿಮನ ಗುಣವನ್ನು ನೂರಾರು ವರ್ಷಗಳು ವರ್ಣಿಸಿದರೂ ಯಾರಿಗೆತಾನೇ ಸಾಧ್ಯವಾದೀತು ?

ಶ್ರೀ ಬ್ರಹ್ಮಮಹಾಪುರಾಣದಲ್ಲಿ ಬ್ರಹ್ಮ ಮತ್ತು ಋಷಿಗಳ ಸಂವಾದದಲ್ಲಿ
ಅನಂತವಾಸುದೇವನ ಮಾಹಾತ್ಮೆವರ್ಣನೆ ಎಂಬ
ನೂರೆಪ್ಪತ್ತಾರನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಏವಂ ವೋಽನಂತಮಾಹಾತ್ಮ್ಯಂ ಕ್ಷೇತ್ರಂ ಚ ಪುರುಷೋತ್ತಮಂ ।
ಭುಕ್ತಿಮುಕ್ತಿಪ್ರದಂ ನೃಣಾಂ ಮಯಾ ಪ್ರೋಕ್ತಂ ಸುದುರ್ಲಭಂ ॥ ೧ ॥
ಯತ್ರಾಸ್ತೇ ಪುಂಡರೀಕಾಕ್ಷಃ ಶಂಖಚಕ್ರಗದಾಧರಃ ।
ಪೀತಾಂಬರಧರಃ ಕೃಷ್ಣಃ ಕಂಸಕೇಶಿನಿಷೂದನಃ ॥ ೨ ॥
ಯೇ ತತ್ರ ಕೃಷ್ಣಂ ಪಶ್ಯಂತಿ ಸುರಾಸುರನಮಸ್ಕೃತಂ ।
ಸಂಕರ್ಷಣಂ ಸುಭದ್ರಾಂ ಚ ಧನ್ಯಾಸ್ತೇ ನಾತ್ರ ಸಂಶಯಃ ॥ ೩ ॥

---

### ನೂರೆಪ್ಪತ್ತೇಳನೆಯ ಅಧ್ಯಾಯವು.

೧. ಬ್ರಹ್ಮನು ಹೇಳಿದನು :—ಎಲೈ ಋಷಿಗಳಿರಾ, ಈ ರೀತಿಯಾಗಿ ನಾನು ಅನಂತನೂ, ಪುರುಷೋತ್ತಮನೂ ಆದ ವಾಸುದೇವನ ಮಹಾತ್ಮೆಯನ್ನೂ ಅವನಿರುವ ಪುರುಷೋತ್ತಮವೆಂಬ ಪುಣ್ಯಕ್ಷೇತ್ರವನ್ನೂ ವರ್ಣಿಸಿದೆನು. ಇದು ಜನಗಳಿಗೆ ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವುದು.

೨–೩. ಆ ಪುರುಷೋತ್ತಮಕ್ಷೇತ್ರದಲ್ಲಿ ಕಮಲದಂತೆ ಕಣ್ಣುಳ್ಳವನೂ, ಶಂಖಚಕ್ರಗದಾಧಾರಿಯೂ ಪೀತಾಂಬರಧರನೂ ಆದ ಶ್ರೀಕೃಷ್ಣನಿರುವನು ಅಲ್ಲಿ ಯಾರು ಅವನನ್ನು ದರ್ಶನಮಾಡುವರೋ ಅವರೇ ಧನ್ಯರು. ಆ ಪರಮಾತ್ಮನು ಕಂಸ, ಕೇಶಿ ಮುಂತಾದವರನ್ನು ನಾಶಮಾಡಿರುವನು. ದೇವಾಸುರರೂ ಸಹ ಅವನನ್ನು ನಮಸ್ಕರಿಸುವರು. ಮತ್ತು ಬಲರಾಮನನ್ನೂ ಸುಭದ್ರೆಯನ್ನೂ ಯಾರು ದರ್ಶನಮಾಡುವರೋ ಅವರೇ ಧನ್ಯರು.

**ತ್ರೈಲೋಕ್ಯಾಧಿಪತಿಂ ದೇವಂ ಸರ್ವಕಾಮಫಲಪ್ರದಂ ।**
**ಯೇ ಧ್ಯಾಯಂತಿ ಸದಾ ಕೃಷ್ಣಂ ಮುಕ್ತಾಸ್ತೇ ನಾತ್ರ ಸಂಶಯಃ ॥ ೪ ॥**

**ಕೃಷ್ಣೇ ರತಾಃ ಕೃಷ್ಣಮನುಸ್ಮರಂತಿ**
**ರಾತ್ರೌ ಚ ಕೃಷ್ಣಂ ಪುನರುತ್ಥಿತಾ ಯೇ ।**
**ತೇ ಭಿನ್ನದೇಹಾಃ ಪ್ರವಿಶಂತಿ ಕೃಷ್ಣಂ**
**ಹವಿರ್ಯಥಾ ಮಂತ್ರಹುತಂ ಹುತಾಶನಂ ॥ ೫ ॥**

**ತಸ್ಮಾತ್ಸದಾ ಮುನಿಶ್ರೇಷ್ಠಾಃ ಕೃಷ್ಣಃ ಕಮಲಲೋಚನಃ ।**
**ತಸ್ಮಿನ್ಕ್ಷೇತ್ರೇ ಪ್ರಯತ್ನೇನ ದ್ರಷ್ಟವ್ಯೋ ಮೋಕ್ಷಕಾಂಕ್ಷಿಭಿಃ ॥ ೬ ॥**

**ಶಯನೋತ್ಥಾಪನೇ ಕೃಷ್ಣಂ ಯೇ ಪಶ್ಯಂತಿ ಮನೀಷಿಣಃ ।**
**ಹಲಾಯುಧಂ ಸುಭದ್ರಾಂ ಚ ಹರೇಃ ಸ್ಥಾನಂ ವ್ರಜಂತಿ ತೇ ॥ ೭ ॥**

---

೪. ತ್ರಿಲೋಕಾಧಿಪತಿಯೂ, ಸರ್ವೇಷ್ಟಾರ್ಥಫಲಪ್ರದನೂ ಆದ ಆ ಶ್ರೀಕೃಷ್ಣನನ್ನು ಯಾರು ಸರ್ವದಾ ಧ್ಯಾನಮಾಡುವರೋ ಅವರಿಗೆ ನಿಶ್ಚಯವಾಗಿ ಮುಕ್ತಿಯುಂಟಾಗುವುದು. ಇದರಲ್ಲಿ ಸಂಶಯವಿಲ್ಲ.

೫. ಶ್ರೀಕೃಷ್ಣನಲ್ಲಿಯೇ ಆಸಕ್ತರಾಗಿ ಕೃಷ್ಣನನ್ನೇ ಯಾವಾಗಲೂ ಧ್ಯಾನ ಮಾಡುತ್ತಾ, ರಾತ್ರಿಕಾಲದಲ್ಲಿಯೂ, ಪುನಃ ಪ್ರಾತಃಕಾಲ ಎದ್ದಾಗಲೂ ಕೂಡ ಅವನನ್ನೇ ಸ್ಮರಿಸುವವರು ಮಂತ್ರಪೂತವಾದ ಹವಿಸ್ಸು ಅಗ್ನಿಯನ್ನು ಪ್ರವೇಶಿಸುವಂತೆ ದೇಹವನ್ನು ಬಿಟ್ಟು, ಕೃಷ್ಣನಲ್ಲಿ ಐಕ್ಯವಾಗುವರು.

೬. ಎಲೈ ಮುನಿಶ್ರೇಷ್ಠರೇ, ಆದುದರಿಂದ ಮೋಕ್ಷಾಭಿಲಾಷೆಯುಳ್ಳವರು ಪುಂಡರೀಕಾಕ್ಷನಾದ ಶ್ರೀ ಕೃಷ್ಣನನ್ನು ಅವನಿರುವ ಪುಣ್ಯಕ್ಷೇತ್ರದಲ್ಲಿ ಪ್ರಯತ್ನ ಪೂರ್ವಕವಾಗಿ ದರ್ಶನಮಾಡಲೇಬೇಕು.

೭. ಹಾಸಿಗೆಯಿಂದ ಎದ್ದಕೂಡಲೇ ಯಾರು ಶ್ರೀಕೃಷ್ಣನ ದರ್ಶನವನ್ನು ಮಾಡುವರೋ ಮತ್ತು ಬಲರಾಮ, ಸುಭದ್ರೆಯರ ದರ್ಶನವನ್ನು ಮಾಡುವರೋ ಅವರು ಆ ಪರಮಾತ್ಮನ ಸ್ಥಾನವನ್ನು ಪಡೆಯುವರು.

ಸರ್ವಕಾಲೇಽಪಿ ಯೇ ಭಕ್ತ್ಯಾ ಪಶ್ಯಂತಿ ಪುರುಷೋತ್ತಮಂ ।
ರೌಹಿಣೇಯಂ ಸುಭದ್ರಾಂ ಚ ವಿಷ್ಣುಲೋಕಂ ವ್ರಜಂತಿ ತೇ ॥ ೮ ॥

ಆಸ್ತೇ ಯಶ್ಚತುರೋ ಮಾಸಾನ್ವಾರ್ಷಿಕಾನ್ಪುರುಷೋತ್ತಮೇ ।
ಪೃಥಿವ್ಯಾಸ್ತೀರ್ಥಯಾತ್ರಾಯಾಃ ಫಲಂ ಪ್ರಾಪ್ನೋತಿ ಚಾಧಿಕಂ ॥ ೯ ॥

ಯೇ ಸರ್ವಕಾಲಂ ತತ್ರೈವ ನಿವಸಂತಿ ಮನೀಷಿಣಃ ।
ಜಿತೇಂದ್ರಿಯಾ ಜಿತಕ್ರೋಧಾ ಲಭಂತೇ ತಪಸಃ ಫಲಂ ॥ ೧೦ ॥

ತಪಸ್ತಪ್ತ್ವಾನ್ಯತೀರ್ಥೇಷು ವರ್ಷಾಣಾಮಯುತಂ ನರಃ ।
ಯದಾಪ್ನೋತಿ ತದಾಪ್ನೋತಿ ಮಾಸೇನ ಪುರುಷೋತ್ತಮೇ ॥ ೧೧ ॥

ತಪಸಾ ಬ್ರಹ್ಮಚರ್ಯೇಣ ಸಂಗತ್ಯಾಗೇನ ಯತ್ಫಲಂ ।
ತತ್ಫಲಂ ಸತತಂ ತತ್ರ ಪ್ರಾಪ್ನುವಂತಿ ಮನೀಷಿಣಃ ॥ ೧೨ ॥

---

೮. ಪುರುಷೋತ್ತಮನನ್ನೂ ಬಲರಾಮ, ಸುಭದ್ರೆಯರನ್ನೂ ಯಾವಾಗಲೂ ನೋಡುವವರು ವಿಷ್ಣುಲೋಕವನ್ನು ಹೊಂದುವರು.

೯. ನಾಲ್ಕಾರುವರ್ಷಗಳ ಅಥವಾ ಮಾಸಗಳಕಾಲ ಆ ಪುರುಷೋತ್ತಮನ ಸನ್ನಿಧಿಯಲ್ಲಿ ವಾಸಮಾಡುವವರು ಪೃಥಿವಿಯಮೇಲಿರುವ ಸರ್ವತೀರ್ಥ ಸ್ನಾನಗಳಿಂದುಂಟಾಗುವ ಫಲಕ್ಕಿಂತ ಅಧಿಕ ಫಲವನ್ನು ಹೊಂದುವರು.

೧೦. ಆ ಪರಮಾತ್ಮನ ಸನ್ನಿಧಿಯಲ್ಲಿಯೇ ಯಾವಾಗಲೂ ಜಿತೇಂದ್ರಿಯರಾಗಿ ಕೋಪವನ್ನು ಬಿಟ್ಟು ಯಾರು ವಾಸಮಾಡುವರೋ ಅವರು ತಪಸ್ಸು ಮಾಡಿದುವರಿಂದ ಉಂಟಾಗುವ ಫಲವನ್ನು ಹೊಂದುವನು.

೧೧. ಮನುಷ್ಯನು ಹತ್ತುಸಾವಿರವರ್ಷಗಳ ಕಾಲ ಬೇರೆ ತೀರ್ಥಗಳ ಸನ್ನಿಧಿಯಲ್ಲಿ ತಪಸ್ಸುಮಾಡಿದರೆ ಯಾವ ಫಲವು ದೊರಕುವುದೋ ಅದೇ ಫಲವು ಪುರುಷೋತ್ತಮಕ್ಷೇತ್ರದಲ್ಲಿ ವಾಸುದೇವನ ಸನ್ನಿಧಿಯಲ್ಲಿ ಒಂದೇ ಒಂದು ತಿಂಗಳು ತಪಸ್ಸು ಮಾಡುವುದರಿಂದ ದೊರಕುವುದು.

೧೨-೧೩. ತಪಸ್ಸು, ಬ್ರಹ್ಮಚರ್ಯ, ಸರ್ವಸಂಗಪರಿತ್ಯಾಗ, ಎಲ್ಲಾ ತೀರ್ಥಗಳಲ್ಲಿಯೂ ಸ್ನಾನದಾನಗಳನ್ನು ಮಾಡುವುದು, ಇವುಗಳಿಂದ ಯಾವ

ಸರ್ವತೀರ್ಥೇಷು ಯತ್ಪುಣ್ಯಂ ಸ್ನಾನದಾನೇನ ಕೀರ್ತಿತಂ ।
ತತ್ಫಲಂ ಸತತಂ ತತ್ರ ಪ್ರಾಪ್ನುವಂತಿ ಮನೀಷಿಣಃ ॥ ೧೩ ॥

ಸಮ್ಯಕ್ತೀರ್ಥೇನ ಯತ್ಪ್ರೋಕ್ತಂ ವ್ರತೇನ ನಿಯಮೇನ ಚ ।
ತತ್ಫಲಂ ಲಭತೇ ತತ್ರ ಪ್ರತ್ಯಹಂ ಪ್ರಯತಃ ಶುಚಿಃ ॥ ೧೪ ॥

ಯಸ್ತು ನಾನಾವಿಧೈರ್ಯಜ್ಞೈರ್ಯತ್ಫಲಂ ಲಭತೇ ನರಃ ।
ತತ್ಫಲಂ ಲಭತೇ ತತ್ರ ಪ್ರತ್ಯಹಂ ಸಂಯತೇಂದ್ರಿಯಃ ॥ ೧೫ ॥

ದೇಹಂ ತ್ಯಜಂತಿ ಪುರುಷಾಸ್ತತ್ರ ಯೇ ಪುರುಷೋತ್ತಮೇ ।
ಕಲ್ಪವೃಕ್ಷಂ ಸಮಾಸಾದ್ಯ ಮುಕ್ತಾಸ್ತೇ ನಾತ್ರ ಸಂಶಯಃ ॥ ೧೬ ॥

ವಟಸಾಗರಯೋರ್ಮಧ್ಯೇ ಯೇ ತ್ಯಜಂತಿ ಕಲೇವರಂ ।
ತೇ ದುರ್ಲಭಂ ಪರಂ ಮೋಕ್ಷಂ ಪ್ರಾಪ್ನುವಂತಿ ನ ಸಂಶಯಃ ॥ ೧೭ ॥

---

ಫಲವುಂಟಾಗುವುದೋ ಅದೇ ಫಲವು ವಾಸುದೇವನ ಸೇವೆಯೊಂದರಿಂದಲೇ ಉಂಟಾಗುವುದು.

೧೪–೧೫. ತೀರ್ಥಯಾತ್ರೆ, ವ್ರತ, ನಿಯಮಗಳು ನಾನಾವಿಧವಾದ ಯಜ್ಞಗಳು, ಇವುಗಳನ್ನಾಚರಿಸಿದರೆ ಯಾವ ಫಲವುಂಟಾಗುವುದೋ ಅದೇ ಫಲವು ಪ್ರತಿನಿತ್ಯವೂ ಜಿತೇಂದ್ರಿಯನಾಗಿ ವಾಸುದೇವನ ಸೇವೆಮಾಡಿದವನಿಗೆ ಉಂಟಾಗುವುದು.

೧೬. ಯಾವ ಮನುಷ್ಯನು ಪುರುಷೋತ್ತಮಕ್ಷೇತ್ರದಲ್ಲಿರುವ ಕಲ್ಪವೃಕ್ಷದೆಡೆಯಲ್ಲಿ ದೇಹವನ್ನು ಬಿಡುವನೋ ಅವನು ನಿಜವಾಗಿಯೂ ಮುಕ್ತಿಯನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ.

೧೭. ಆ ಕ್ಷೇತ್ರದಲ್ಲಿರುವ ವಟವೃಕ್ಷದ ಮತ್ತು ಸಾಗರಗಳ ಮಧ್ಯಭಾಗದಲ್ಲಿ ಯಾರು ತಮ್ಮ ದೇಹವನ್ನು ಬಿಡುವರೋ ಅವರು ಅತಿ ದುರ್ಲಭವಾದ ಮತ್ತು ಪರಮಪವಿತ್ರವಾದ ಮೋಕ್ಷವನ್ನು ಪಡೆಯುವರು.

**ಅನಿಚ್ಛನ್ನಪಿ ಯಸ್ತತ್ರ ಪ್ರಾಣಾಂಸ್ತ್ಯಜತಿ ಮಾನವಃ ।**
**ಸೋಽಪಿ ದುಃಖವಿನಿರ್ಮುಕ್ತೋ ಮುಕ್ತಿಂ ಪ್ರಾಪ್ನೋತಿ ದುರ್ಲಭಾಂ ॥೧೮॥**

**ಕೃಮಿಕೀಟಪತಂಗಾದ್ಯಾಸ್ತಿರ್ಯಗ್ಯೋನಿಗತಾಶ್ಚ ಯೇ ।**
**ತತ್ರ ದೇಹಂ ಪರಿತ್ಯಜ್ಯ ತೇ ಯಾಂತಿ ಪರಮಾಂ ಗತಿಂ ॥ ೧೯ ॥**

**ಭ್ರಾಂತಿಂ ಲೋಕಸ್ಯ ಪಶ್ಯಧ್ವಮನ್ಯತೀರ್ಥಂ ಪ್ರತಿ ದ್ವಿಜಾಃ ।**
**ಪುರುಷಾಖ್ಯೇನ ಯತ್ಪ್ರಾಪ್ತಮನ್ಯತೀರ್ಥಫಲಾದಿಕಂ ॥ ೨೦ ॥**

**ಸಕೃತ್ಪಶ್ಯತಿ ಯೋ ಮರ್ತ್ಯಃ ಶ್ರದ್ಧಯಾ ಪುರುಷೋತ್ತಮಂ ।**
**ಪುರುಷಾಣಾಂ ಸಹಸ್ರೇಷು ಸ ಭವೇದುತ್ತಮಃ ಪುಮಾನ್ ॥ ೨೧ ॥**

**ಪ್ರಕೃತೇಃ ಸ ಪರೋ ಯಸ್ಮಾತ್ಪುರುಷಾದಪಿ ಚೋತ್ತಮಃ ।**
**ತಸ್ಮಾದ್ವೇದೇ ಪುರಾಣೇ ಚ ಲೋಕೇಽಸ್ಮಿನ್ಪುರುಷೋತ್ತಮಃ ॥ ೨೨ ॥**

---

೧೮. ಇಷ್ಟವಿಲ್ಲದಿದ್ದರೂ ಕಾರಣಾಂತರದಿಂದ ಆ ಕ್ಷೇತ್ರದಲ್ಲಿ ಯಾರು ತಮ್ಮ ಪ್ರಾಣಗಳನ್ನು ಬಿಡುವರೋ ಅವರು ದುಃಖವಿಹೀನರಾಗಿ ದುರ್ಲಭವಾದ ಮುಕ್ತಿಯನ್ನು ಪಡೆಯುವರು.

೧೯. ಕೃಮಿ, ಕೀಟ, ಪತಂತ ಮೊದಲಾದ ತಿರ್ಯಗ್ಜಾತಿಯ ಯಾವ ಪ್ರಾಣಿಯಾದರೂ ಸರಿಯೆ ಪುರುಷೋತ್ತಮನ ಸನ್ನಿಧಿಯಲ್ಲಿ ದೇಹವನ್ನು ಬಿಟ್ಟರೆ ಉತ್ತಮವಾದ ಗತಿಯನ್ನು ಪಡೆಯುವವು.

೨೦. ಎಲೈ ಋಷಿಗಳಿರಾ, ಜನಗಳ ಭ್ರಾಂತಿಯನ್ನು ನೋಡಿರಿ. ಈ ತೀರ್ಥವನ್ನು ಬಿಟ್ಟು ಬೇರೆ ತೀರ್ಥಗಳಿಗೆ ಹೋಗುವರು. ಪುರುಷೋತ್ತಮನಿರುವ ತೀರ್ಥದಿಂದಲೇ ಸಮಸ್ತ ತೀರ್ಥಗಳಿಂದುಂಟಾಗುವ ಫಲವು ಬರುವುದು.

೨೧. ಯಾವ ಮನುಷ್ಯನು ಪುರುಷೋತ್ತಮಕ್ಷೇತ್ರವನ್ನು ಶ್ರದ್ಧೆಯಿಂದ ಒಂದುಸಾರಿಯಾದರೂ ನೋಡುವನೋ ಅವನೇ ಸಹಸ್ರಪುರುಷರೊಳಗೆ ಶ್ರೇಷ್ಠನಾದ ಪುರುಷನು.

೨೨. ಅವನು ಪ್ರಕೃತಿಗಿಂತಲೂ ಶ್ರೇಷ್ಠನು. ಪುರುಷನಿಗಿಂತಲೂ ಉತ್ತಮನು. ಆದುದರಿಂದಲೇ ವೇದದಲ್ಲಿಯೂ, ಪುರಾಣದಲ್ಲಿಯೂ, ಲೋಕವ್ಯವಹಾರದಲ್ಲಿಯೂ ಪುರುಷೋತ್ತಮನೆಂದು ಹೆಸರಾದವನು.

ಯೋಽಸೌ ಪುರಾಣೇ ವೇದಾಂತೇ ಪರಮಾತ್ಮೇತ್ಯುದಾಹೃತಃ ।
ಆಸ್ತೇ ವಿಶ್ವೋಪಕಾರಾಯ ತೇನಾಸೌ ಪುರುಷೋತ್ತಮಃ ॥ ೨೩ ॥

ಪಥಿ ಶ್ಮಶಾನೇ ಗೃಹಮಂಡಪೇ ವಾ
ರಥ್ಯಾಪ್ರದೇಶೇಷ್ವಪಿ ಯತ್ರ ಕುತ್ರ ।
ಇಚ್ಛನ್ನನಿಚ್ಛನ್ನಪಿ ತತ್ರ ದೇಹಂ
ಸಂತ್ಯಜ್ಯ ಮೋಕ್ಷಂ ಲಭತೇ ಮನುಷ್ಯಃ ॥ ೨೪ ॥

ತಸ್ಮಾತ್ಸರ್ವಪ್ರಯತ್ನೇನ ತಸ್ಮಿನ್ಕ್ಷೇತ್ರೇ ದ್ವಿಜೋತ್ತಮಾಃ ।
ದೇಹತ್ಯಾಗೋ ನರೈಃ ಕಾರ್ಯಃ ಸಮ್ಯಜಟ್ಮೋಕ್ಷಾಭಿಕಾಂಕ್ಷಿಭಿಃ ॥ ೨೫ ॥

ಪುರುಷಾಖ್ಯಸ್ಯ ಮಾಹಾತ್ಮ್ಯಂ ನ ಭೂತಂ ನ ಭವಿಷ್ಯತಿ ।
ತ್ಯಕ್ತ್ವಾ ಯತ್ರ ನರೋ ದೇಹಂ ಮುಕ್ತಿಂ ಪ್ರಾಪ್ನೋತಿ ದುರ್ಲಭಾಂ ॥ ೨೬ ॥

---

೨೩. ಯಾರು ಪುರಾಣಗಳಲ್ಲಿಯೂ, ವೇದಾಂತಗಳಲ್ಲಿಯೂ ಪರಮಾತ್ಮನೆಂದು ಹೇಳಲ್ಪಡುತ್ತಿರುವನೋ ಅವನು ಪ್ರಪಂಚದ ಉಪಕಾರಕ್ಕೋಸ್ಕರವಾಗಿ ಇಲ್ಲಿ ವಾಸವಾಗಿರುವುದರಿಂದ ಇದಕ್ಕೆ ಪುರುಷೋತ್ತಮವೆಂದು ಹೆಸರಾಯಿತು.

೨೪. ಮಾರ್ಗಮಧ್ಯದಲ್ಲಿಯಾಗಲೀ, ಶ್ಮಶಾನ, ಮನೆ, ಮಂಡಪ, ರಸ್ತೆ ಮುಂತಾದ ಯಾವ ಸ್ಥಳಗಳಲ್ಲಿಯಾದರೂ ಸರಿಯೇ ಇಷ್ಟವಿದ್ದರೂ, ಇಲ್ಲದಿದ್ದರೂ ಆ ಪರಮಾತ್ಮನಿಗೋಸ್ಕರ ದೇಹವನ್ನು ಬಿಟ್ಟರೆ ಅವನಿಗೆ ಮೋಕ್ಷವು ಖಂಡಿತವಾಗಿ ಸಿಗುವುದು.

೨೫. ಎಲೈ ಋಷಿಗಳಿರಾ, ಆದುದರಿಂದ ಆ ಕ್ಷೇತ್ರದಲ್ಲಿ ಪ್ರಯತ್ನದಿಂದಲಾದರೂ ದೇಹವನ್ನು ಬಿಡಲೇಬೇಕು. ಅದರಿಂದ ಮೋಕ್ಷವು ಸಿಕ್ಕುವುದು.

೨೬. ಪುರುಷೋತ್ತಮವೆಂಬ ಕ್ಷೇತ್ರದಂತಿರುವ ಮತ್ತೊಂದು ಕ್ಷೇತ್ರವು ಹಿಂದೆಯೂ ಇರಲಿಲ್ಲ ಮುಂದೆ ಉಂಟಾಗುವುದೂ ಇಲ್ಲ ಇಂತಹ ಪರಮಾತ್ಮನ ಸನ್ನಿಧಿಯಲ್ಲಿ ದೇಹವನ್ನು ಬಿಟ್ಟ ನರನು ಮುಕ್ತಿಯನ್ನು ಪಡೆಯುವನೆಂಬುದರಲ್ಲಿ ಸಂಶಯವಿಲ್ಲ.

ಗುಣಾನಾಮೇಕದೇಶೋಽಯಂ ಮಯಾ ಕ್ಷೇತ್ರಸ್ಯ ಕೀರ್ತಿತಃ ।
ಕಃ ಸಮಸ್ತಾನ್ಗುಣಾನ್ವಕ್ತುಂ ಶಕ್ತೋ ವರ್ಷಶತೈರಪಿ ॥ ೨೭ ॥

ಯದಿ ಯೂಯಂ ಮುನಿಶ್ರೇಷ್ಠಾ ಮೋಕ್ಷಮಿಚ್ಛಥ ಶಾಶ್ವತಂ ।
ತಸ್ಮಿನ್ಕ್ಷೇತ್ರವರೇ ಪುಣ್ಯೇ ನಿವಸಧ್ವಮತಂದ್ರಿತಾಃ ॥ ೨೮ ॥

॥ ವ್ಯಾಸ ಉವಾಚ ॥

ತೇ ತಸ್ಯ ವಚನಂ ಶ್ರುತ್ವಾ ಬ್ರಹ್ಮಣೋಽವ್ಯಕ್ತಜನ್ಮನಃ ।
ನಿವಾಸಂ ಚಕ್ರಿರೇ ತತ್ರ ಅವಾಪುಃ ಪರಮಂ ಪದಂ ॥ ೨೯ ॥

ತಸ್ಮಾದ್ಯೂಯಂ ಪ್ರಯತ್ನೇನ ನಿವಸಧ್ವಂ ದ್ವಿಜೋತ್ತಮಾಃ ।
ಪುರುಷಾಖ್ಯೇ ವರೇ ಕ್ಷೇತ್ರೇ ಯದಿ ಮುಕ್ತಿಮಭೀಪ್ಸಥ ॥ ೩೦ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬ್ರಹ್ಮಋಷಿಸಂವಾದೇ
ಕ್ಷೇತ್ರಮಾಹಾತ್ಮ್ಯವರ್ಣನಂ ನಾಮ ಸಪ್ತಸಪ್ತ-
ತ್ಯಧಿಕಶತತಮೋಽಧ್ಯಾಯಃ

---

೨೭. ಈ ಕ್ಷೇತ್ರದ ಅಪಾರಗುಣಗಳಲ್ಲಿ ಒಂದು ಸ್ವಲ್ಪಭಾಗವನ್ನು ಮಾತ್ರ ಹೇಳಿರುವೆನು. ಇದರ ಸಮಸ್ತ ಗುಣಗಳನ್ನು ಹೇಳಲು ನೂರು ವರ್ಷಗಳಾದರೂ ಯಾರಿಗೂ ಸಾಧ್ಯವಿಲ್ಲ

೨೮. ಎಲೈ ಮುನಿವರರೇ, ನೀವೂ ಮೋಕ್ಷವನ್ನು ಅಪೇಕ್ಷಿಸುವಿರಾದರೆ ಆ ಪವಿತ್ರವಾದ ಕ್ಷೇತ್ರದಲ್ಲಿಯೇ ವಾಸಮಾಡಿರಿ ಎಂದನು.

೨೯. ವ್ಯಾಸನು ಹೇಳಿದನು :—ಬ್ರಹ್ಮನ ಮಾತನ್ನು ಕೇಳಿ ಋಷಿಗಳೆಲ್ಲರೂ ಆ ಪುರುಷೋತ್ತಮವೆಂಬ ಕ್ಷೇತ್ರದಲ್ಲಿ ವಾಸಮಾಡಿ ಪರಮಪದವನ್ನು ಹೊಂದಿದರು.

೩೦. ಆದುದರಿಂದ ಎಲೈ ಬ್ರಾಹ್ಮಣಶ್ರೇಷ್ಠರೇ, ನೀವೂ ಸಹ ಮುಕ್ತಿಯನ್ನಪೇಕ್ಷಿಸುವವರಾದರೆ ಆ ಪುರುಷೋತ್ತಮಕ್ಷೇತ್ರದಲ್ಲಿ ಪ್ರಯತ್ನಪೂರ್ವಕವಾಗಿಯಾದರೂ ವಾಸಮಾಡಿರಿ.

ಇಲ್ಲಿಗೆ ಶ್ರೀಬ್ರಹ್ಮಮಹಾಪುರಾಣದಲ್ಲಿ ಬ್ರಹ್ಮ ಋಷಿಗಳ ಸಂವಾದದಲ್ಲಿ ಕ್ಷೇತ್ರಮಾಹಾತ್ಮ್ಯವರ್ಣನೆಯೆಂಬ ನೂರೆಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಅಷ್ಟಸಪ್ತತ್ಯಧಿಕಶತತಮೋಽಧ್ಯಾಯಃ

---

॥ ವ್ಯಾಸ ಉವಾಚ ॥

**ತಸ್ಮಿನ್ ಕ್ಷೇತ್ರೇ ಮುನಿಶ್ರೇಷ್ಠಾಃ ಸರ್ವಸತ್ತ್ವಸುಖಾವಹೇ ।**
**ಧರ್ಮಾರ್ಥಕಾಮಮೋಕ್ಷಾಣಾಂ ಫಲದೇ ಪುರುಷೋತ್ತಮೇ ॥ ೧ ॥**

**ಕಂಡುರ್ನಾಮ ಮಹಾತೇಜಾ ಋಷಿಃ ಪರಮಧಾರ್ಮಿಕಃ ।**
**ಸತ್ಯವಾದೀ ಶುಚಿರ್ದಾಂತಃ ಸರ್ವಭೂತಹಿತೇ ರತಃ ॥ ೨ ॥**

**ಜಿತೇಂದ್ರಿಯೋ ಜಿತಕ್ರೋಧೋ ವೇದವೇದಾಂಗಪಾರಗಃ ।**
**ಅವಾಪ ಪರಮಾಂ ಸಿದ್ಧಿಮಾರಾಧ್ಯ ಪುರುಷೋತ್ತಮಂ ॥ ೩ ॥**

---

### ನೂರೆಪ್ಪತ್ತೆಂಟನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯಿಂತೆಂದನು :—ಎಲೈ ಋಷಿಗಳೇ, ಸರ್ವಪ್ರಾಣಿಗಳಿಗೂ ಸುಖಕರವಾದ ಧರ್ಮಾರ್ಥಕಾಮಮೋಕ್ಷಗಳನ್ನುಂಟುಮಾಡುವ ಈ ಪುರುಷೋತ್ತಮಕ್ಷೇತ್ರದಲ್ಲಿ ಕಂಡುವೆಂಬ ಮಹಾತೇಜಸ್ವಿಯೂ ಪರಮಧಾರ್ಮಿಕನೂ ಆದ ಋಷಿಯು ಇದ್ದನು.

೨–೩. ಅವನು ಯಾವಾಗಲೂ ಸತ್ಯವನ್ನೇ ನುಡಿಯುತ್ತಿದ್ದನು. ದಾಂತನೂ ಎಲ್ಲಾ ಪ್ರಾಣಿಗಳಲ್ಲಿಯೂ ಹಿತದೃಷ್ಟಿಯುಳ್ಳವನಾಗಿಯೂ ಇದ್ದನು. ಅವನು ಜಿತೇಂದ್ರಿಯನು, ಕೋಪವನ್ನು ಜಯಿಸಿದವನು, ವೇದವೇದಾಂಗ ಪಾರಂಗತನು. ಈ ಋಷಿಯು ಪುರುಷೋತ್ತಮನನ್ನು ಆರಾಧಿಸಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆದನು.

**ಅನ್ಯೇಽಪಿ ತತ್ರ ಸಂಸಿದ್ಧಾ ಮುನಯಃ ಸಂಶಿತವ್ರತಾಃ ।**
**ಸರ್ವಭೂತಹಿತಾ ದಾಂತಾ ಜಿತಕ್ರೋಧಾ ವಿಮತ್ಸರಾಃ ॥ ೪ ॥**

**॥ ಮುನಯ ಊಚುಃ ॥**

**ಕೋಽಸೌ ಕಂಡುಃ ಕಥಂ ತತ್ರ ಜಗಾಮ ಪರಮಾಂ ಗತಿಂ ।**
**ಶ್ರೋತುಮಿಚ್ಛಾಮಹೇ ತಸ್ಯ ಚರಿತಂ ಬ್ರೂಹಿ ಸತ್ತಮ ॥ ೫ ॥**

**॥ ವ್ಯಾಸ ಉವಾಚ ॥**

**ಶೃಣುಧ್ವಂ ಮುನಿಶಾರ್ದೂಲಾಃ ಕಥಾಂ ತಸ್ಯ ಮನೋಹರಾಂ ।**
**ಪ್ರವಕ್ಷ್ಯಾಮಿ ಸಮಾಸೇನ ಮುನೇಸ್ತಸ್ಯ ವಿಚೇಷ್ಟಿತಂ ॥ ೬ ॥**

**ಪವಿತ್ರೇ ಗೋತಮೀತೀರೇ ವಿಜನೇ ಸುಮನೋಹರೇ ।**
**ಕಂದಮೂಲಫಲೈಃ ಪೂರ್ಣೇ ಸಮಿತ್ಪುಷ್ಪಕುಶಾನ್ವಿತೈಃ ॥ ೭ ॥**

---

೪. ಅದೇ ಕ್ಷೇತ್ರದಲ್ಲಿ ಸಿದ್ಧಿಯನ್ನು ಪಡೆದ ಇನ್ನೂ ಅನೇಕ ಜನ ಋಷಿಗಳಿದ್ದರು. ಅವರೂ ಸಹ ಎಲ್ಲರಿಗೂ ಹಿತವನ್ನುಂಟುಮಾಡುವವರು. ದಾಂತರು ಕೋಪವನ್ನು ಬಿಟ್ಟಿದ್ದರು. ಮತ್ಸರಹೀನರಾಗಿದ್ದರು.

೫. ಮುನಿಗಳು ಕೇಳಿದರು.—ಆ ಕಂಡುವು ಯಾರು? ಅವನು ಹೇಗೆ ಪುರುಷೋತ್ತಮಕ್ಷೇತ್ರಕ್ಕೆ ಹೋದನು? ಅಲ್ಲಿ ಹೇಗೆ ಸಿದ್ಧಿಯನ್ನು ಪಡೆದನು? ಎಲೈ ವ್ಯಾಸನೇ, ಇದರ ಚರಿತ್ರೆಯಲ್ಲವನ್ನೂ ಕೇಳಬೇಕೆಂದು ಇಷ್ಟಪಡುವೆವು. ದಯವಿಟ್ಟು ತಿಳಿಸು ಎಂದರು.

೬. ವ್ಯಾಸನು ಹೇಳಿದನು.—ಎಲೈ ಋಷಿಶ್ರೇಷ್ಠರೇ, ಆ ಕಂಡುಋಷಿಯ ವಿಷಯವಾಗಿ ಒಂದು ಮನೋಹರವಾದ ಕಥೆಯನ್ನು ಹೇಳುವೆನು ಕೇಳಿರಿ.

೭-೮. ಪವಿತ್ರವಾದ ಗೌತಮೀನದಿಯ ತೀರವಿರುವುದಷ್ಟೆ. ಅದು ವಿಜನವಾಗಿಯೂ ಮನೋಹರವಾಗಿಯೂ ಇರುವುದು. ಅಲ್ಲಿ ಕಂದಮೂಲಫಲಗಳು ಸಮೃದ್ಧಿಯಾಗಿರುವುವು. ಸಮಿತ್, ಪುಷ್ಪ, ಕುಶ ಮುಂತಾದುವುಗಳು ಅಧಿಕ

ನಾನಾದ್ರುಮಲತಾಕೀರ್ಣೇ ನಾನಾಪುಷ್ಪೋಪಶೋಭಿತೇ ।
ನಾನಾಪಕ್ಷಿರುತೇ ರಮ್ಯೇ ನಾನಾಮೃಗಗಣಾನ್ವಿತೇ ॥ ೮ ॥

ತತ್ರಾಶ್ರಮಪದಂ ಕಂಡೋರ್ಬಭೂವ ಮುನಿಸತ್ತಮಾಃ ।
ಸರ್ವರ್ತುಫಲಪುಷ್ಪಾಢ್ಯಂ ಕದಲೀಖಂಡಮಂಡಿತಂ ॥ ೯ ॥

ತಪಸ್ತೇಪೇ ಮುನಿಸ್ತತ್ರ ಸುಮಹತ್ಪರಮಾದ್ಭುತಂ ।
ವ್ರತೋಪವಾಸೈರ್ನಿಯಮೈಃ ಸ್ನಾನಮೌನಸುಸಂಯಮೈಃ ॥ ೧೦ ॥

ಗ್ರೀಷ್ಮೇ ಪಂಚತಪಾ ಭೂತ್ವಾ ವರ್ಷಾಸು ಸ್ಥಂಡಿಲೇಶಯಃ ।
ಆರ್ದ್ರವಾಸಾಸ್ತು ಹೇಮಂತೇ ಸ ತೇಪೇ ಸುಮಹತ್ತಪಃ ॥ ೧೧ ॥

ದೃಷ್ಟ್ವಾ ತು ತಪಸೋ ವೀರ್ಯಂ ಮುನೇಸ್ತಸ್ಯ ಸುವಿಸ್ಮಿತಾಃ ।
ಬಭೂವುರ್ದೇವಗಂಧರ್ವಾಃ ಸಿದ್ಧವಿದ್ಯಾಧರಾಸ್ತಥಾ ॥ ೧೨ ॥

---

ವಾಗಿರುವುವು. ಅನೇಕ ವಿಧವಾದ ವೃಕ್ಷಗಳೂ, ಬಳ್ಳಿಗಳೂ, ಹೂವಿನ ಗಿಡಗಳೂ ಇರುವುದರಿಂದ ಬಹುರಮ್ಯವಾಗಿರುವುದು. ಅನೇಕ ವಿಧವಾದ ಪಕ್ಷಿಗಳು ಇಂಪಾಗಿ ಧ್ವನಿಮಾಡುತ್ತಿರುವುವು. ನಾನಾ ಬಗೆಯ ಮೃಗಗಳೆಲ್ಲವೂ ಅಲ್ಲಿರುವುವು. ಇಂತಹ ಗೌತಮೀನದಿಯ ದಡದಲ್ಲಿ ಆ ಕಂಡುಋಷಿಯ ಆಶ್ರಮವಿದ್ದಿತು.

೯–೧೦. ಆ ಆಶ್ರಮದ ಅಕ್ಕಪಕ್ಕಗಳಲ್ಲಿ ಎಲ್ಲಾ ಋತುಗಳಲ್ಲಿಯೂ ಪುಷ್ಪಗಳು ಬಿಡುತ್ತಿದ್ದವು. ಬಾಳೆ ಮುಂತಾದುವುಗಳಿಂದ ಅತಿಮನೋಹರವಾಗಿದ್ದಿತು. ಇಂತಹ ಆಶ್ರಮದಲ್ಲಿ ಆ ಕಂಡುವು ವ್ರತ, ಉಪವಾಸ, ನಿಯಮಗಳನ್ನು ಆಚರಿಸುತ್ತಾ ಸ್ನಾನ ಮೌನ ಮುಂತಾದುವುಗಳನ್ನು ಅನುಷ್ಠಾನ ಮಾಡುತ್ತಾ ಅದ್ಭುತವಾಗಿ ತಪಸ್ಸುಮಾಡುತ್ತಿದ್ದನು.

೧೧–೧೨. ಗ್ರೀಷ್ಮಕಾಲದಲ್ಲಿ ಪಂಚಾಗ್ನಿಮಧ್ಯದಲ್ಲಿ ನಿಂತುಕೊಂಡೂ, ವರ್ಷಾಕಾಲದಲ್ಲಿ ಯಜ್ಞವೇದಿಕೆಯ ಹತ್ತಿರ ಇದ್ದೂ, ಹೇಮಂತಕಾಲದಲ್ಲಿ ಒದ್ದೆಯ ಬಟ್ಟೆಯನ್ನುಟ್ಟೂ ಬಹಳ ಕಠಿನವಾಗಿ ತಪಸ್ಸುಮಾಡಿದನು.

**ಭೂಮಿಂ ತಥಾಂತರಿಕ್ಷಂ ಚ ದಿವಂ ಚ ಮುನಿಸತ್ತಮಾಃ ।**
**ಕಂಡುಃ ಸಂತಾಪಯಾಮಾಸ ತ್ರೈಲೋಕ್ಯಂ ತಪಸೋ ಬಲಾತ್ ॥ ೧೩ ॥**

**ಅಹೋಽಸ್ಯ ಪರಮಂ ಧೈರ್ಯಮಹೋಽಸ್ಯ ಪರಮಂ ತಪಃ ।**
**ಇತ್ಯಬ್ರುವಂಸ್ತದಾ ದೃಷ್ಟ್ವಾ ದೇವಾಸ್ತಂ ತಪಸಿ ಸ್ಥಿತಂ ॥ ೧೪ ॥**

**ಮಂತ್ರಯಾಮಾಸುರವ್ಯಗ್ರಾಃ ಶಕ್ರೇಣ ಸಹಿತಾಸ್ತದಾ ।**
**ಭಯಾತ್ತಸ್ಯ ಸಮುದ್ವಿಗ್ನಾಸ್ತಪೋವಿಘ್ನಮಭೀಪ್ಸವಃ ॥ ೧೫ ॥**

**ಜ್ಞಾತ್ವಾ ತೇಷಾಮಭಿಪ್ರಾಯಂ ಶಕ್ರಸ್ತ್ರಿಭುವನೇಶ್ವರಃ ।**
**ಪ್ರಮ್ಲೋಚಾಖ್ಯಾಂ ವರಾರೋಹಾಂ ರೂಪಯೌವನಗರ್ವಿತಾಂ ॥ ೧೬ ॥**

**ಸುಮಧ್ಯಾಂ ಚಾರುಜಂಘಾಂ ತಾಂ ಪೀನಶ್ರೋಣಿಪಯೋಧರಾಂ ।**
**ಸರ್ವಲಕ್ಷಣಸಂಪನ್ನಾಂ ಪ್ರೋವಾಚ ಬಲಸೂದನಃ ॥ ೧೭ ॥**

---

ಕಂಡುಋಷಿಯ ತಪಶ್ಯಕ್ತಿಯನ್ನು ನೋಡಿ ದೇವ, ಗಂಧರ್ವ, ಸಿದ್ಧ, ವಿದ್ಯಾಧರ ಇವರೆಲ್ಲರೂ ಬಹಳ ವಿಸ್ಮಿತರಾದರು.

೧೩. ಕಂಡುವು ತನ್ನ ತಪಶ್ಯಕ್ತಿಯಿಂದ ಭೂಮಿ, ಅಂತರಿಕ್ಷ. ಸ್ವರ್ಗ ಅಷ್ಟೇಕೆ ಮೂರು ಲೋಕಗಳನ್ನೂ ಕೂಡ ಸಂತಾಪಗೊಳಿಸಿದನು.

೧೪. ತಪಸ್ಸುಮಾಡುತ್ತಿರುವ ಕಂಡುವನ್ನು ನೋಡಿ ದೇವತೆಗಳೆಲ್ಲರೂ "ಅಹಹ! ಎಂತಹ ಧೈರ್ಯ, ಎಂತಹ ತಪಸ್ಸು" ಎಂದು ಬೆರಗಾದರು.

೧೫. ಆಮೇಲೆ ದೇವತೆಗಳೆಲ್ಲರೂ ಭಯಗೊಂಡು ಏನಾದರೂ ಮಾಡಿ ಇವನ ತಪಸ್ಸನ್ನು ನಾಶಮಾಡಬೇಕೆಂದು ಇಂದ್ರನೊಡನೆ ಮಂತ್ರಾಲೋಚನೆ ಮಾಡಿದರು.

೧೬-೧೭. ದೇವತೆಗಳ ಅಭಿಮತವನ್ನು ತಿಳಿದು ತ್ರಿಲೋಕಾಧಿಪತಿಯಾದ ಇಂದ್ರನು ಪ್ರಮ್ಲೋಚೆ ಎಂಬ ಸುಂದರಿಯನ್ನು ಕಂಡುವಿನಲ್ಲಿಗೆ ಕಳುಹಿಸಿದನು. ಅವಳು ಒಳ್ಳೆಯ ಯುವತಿಯು ಅದಕ್ಕೆ ತಕ್ಕಂತೆ ರೂಪವೂ ಇದ್ದಿತು. ಅವಳ ನಡುವು ಸಣ್ಣಗೂ, ಕಟಿಪ್ರದೇಶಗಳು ನೋಡಲು ಮನೋಹರವಾಗಿಯೂ ಇದ್ದವು. ಅವಳ ಶ್ರೋಣಿಪಯೋಧರಗಳು ದಪ್ಪವಾಗಿ ರಮ್ಯ

॥ ಶಕ್ರ ಉವಾಚ ॥

ಪ್ರಮ್ಲೋಚೇ ಗಚ್ಛ ಶೀಘ್ರಂ ತಂ ಯದಾಸೌ ತಪ್ಯತೇ ಮುನಿಃ ।
ವಿಘ್ನಾರ್ಥಂ ತಸ್ಯ ತಪಸಃ ಕ್ಷೋಭಯಸ್ವಾಂಶು ಸುಪ್ರಭೇ ॥೧೮॥

॥ ಪ್ರಮ್ಲೋಚೋವಾಚ ॥

ತವ ವಾಕ್ಯಂ ಸುರಶ್ರೇಷ್ಠ ಕರೋಮಿ ಸತತಂ ಪ್ರಭೋ ।
ಕಿಂತು ಶಂಕಾ ಮಮೈವಾತ್ರ ಜೀವಿತಸ್ಯ ಚ ಸಂಶಯಃ ॥ ೧೯ ॥

ಬಿಭೇಮಿ ತಂ ಮುನಿವರಂ ಬ್ರಹ್ಮಚರ್ಯವ್ರತೇ ಸ್ಥಿತಂ ।
ಅತ್ಯುಗ್ರಂ ದೀಪ್ತತಪಸಂ ಜ್ವಲನಾರ್ಕಸಮಪ್ರಭಂ ॥ ೨೦ ॥

ಜ್ಞಾತ್ವಾ ಮಾಂ ಸ ಮುನಿಃ ಕ್ರೋಧಾದ್ವಿಘ್ನಾರ್ಥಂ ಸಮುಪಾಗತಾಂ ।
ಕಂಡುಃ ಪರಮತೇಜಸ್ವೀ ಶಾಪಂ ದಾಸ್ಯತಿ ದುಃಸಹಂ ॥ ೨೧ ॥

---

ವಾಗಿದ್ದವು. ಅಂತೂ ಆವಳು ಸರ್ವಲಕ್ಷಣಸಂಪನ್ನೆಯಾಗಿದ್ದಳು. ಇಂದ್ರನು ಅವಳನ್ನು ಕುರಿತು,

೧೮. ಎಲೈ ಪ್ರಮ್ಲೋಚೆಯೇ, ಆ ಆಶ್ರಮದಲ್ಲಿ ಕಂಡುವು ತಪಸ್ಸು ಮಾಡುತ್ತಿರುವನು. ನೀನು ಜಾಗ್ರತೆಯಾಗಿ ಹೋಗಿ ಅವನ ತಪಸ್ಸಿಗೆ ವಿಘ್ನವನ್ನುಂಟುಮಾಡು. ಅವನ ಮನಸ್ಸು ಚಂಚಲವಾಗುವಂತೆ ಮಾಡು ಎಂದನು.

೧೯. ಅದಕ್ಕೆ ಪ್ರಮ್ಲೋಚೆಯು ಎಲೈ ದೇವೇಂದ್ರನೇ, ನೀನು ಹೇಳಿದಂತೆ ಕೇಳುವೆನು. ಆದರೆ ನಾನು ಅಲ್ಲಿಗೆ ಹೋದರೆ ನನ್ನ ಪ್ರಾಣವು ಉಳಿಯುವುದೋ ಇಲ್ಲವೋ ಎಂಬ ಸಂಶಯವು ಮಾತ್ರ ನನಗೆ ಉಂಟಾಗಿರುವುದು.

೨೦. ಆ ಋಷಿಯಾದರೋ ನೈಷ್ಠಿಕಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಾ ಬಹಳ ಭಯಂಕರವಾಗಿ ತಪಸ್ಸುಮಾಡುತ್ತಿರುವನು. ಉರಿಯುತ್ತಿರುವ ಸೂರ್ಯನಂತೆ ಪ್ರಕಾಶಿಸುತ್ತಿರುವನು.

೨೧. ನಾನು ತಪಸ್ಸನ್ನು ಕೆಡಿಸಲು ಬಂದಿರುವುದನ್ನು ಕಂಡುವು ತಿಳಿದರೆ ಪರಮ ತೇಜಸ್ವಿಯಾದಾತನು ಅತಿ ಕೋಪದಿಂದ ಸಹಿಸಲಸಾಧ್ಯವಾದ ಶಾಪವನ್ನು ಕೊಡುವನು.

ಊರ್ವಶೀ ಮೇನಕಾ ರಂಭಾ ಘೃತಾಚೀ ಪುಂಜಿಕಸ್ಥಲಾ ।
ವಿಶ್ವಾಚೀ ಸಹಜನ್ಯಾ ಚ ಪೂರ್ವಚಿತ್ತಿಸ್ತಿಲೋತ್ತಮಾ ॥ ೨೨ ॥

ಅಲಂಬುಷಾ ಮಿಶ್ರಕೇಶೀ ಶಶಿಲೇಖಾ ಚ ವಾಮನಾ ।
ಅನ್ಯಾಶ್ಚಾಪ್ಸರಸಃ ಸಂತಿ ರೂಪಯೌವನಗರ್ವಿತಾಃ ॥ ೨೩ ॥

ಸುಮಧ್ಯಾಶ್ಚಾರುವದನಾಃ ಪೀನೋನ್ನತಪಯೋಧರಾಃ ।
ಕಾಮಪ್ರಧಾನಕುಶಲಾಸ್ತಾಸ್ತತ್ರ ಸಂನಿಯೋಜಯ ॥ ೨೪ ॥

॥ ಬ್ರಹ್ಮೋವಾಚ ॥

ತಸ್ಯಾಸ್ತದ್ವಚನಂ ಶ್ರುತ್ವಾ ಪುನಃ ಪ್ರಾಹ ಶಚೀಪತಿಃ ।
ತಿಷ್ಠಂತು ನಾಮ ಚಾನ್ಯಾಸ್ತಾಸ್ತ್ವಂ ಚಾತ್ರ ಕುಶಲಾ ಶುಭೇ ॥ ೨೫ ॥

ಕಾಮಂ ವಸಂತಂ ವಾಯುಂ ಚ ಸಹಾಯಾರ್ಥೇ ದದಾಮಿ ತೇ ।
ತೈಃ ಸಾರ್ಧಂ ಗಚ್ಛ ಸುಶ್ರೋಣಿ ಯತ್ರಾಸ್ತೇ ಸ ಮಹಾಮುನಿಃ ॥ ೨೬ ॥

---

೨೨-೨೪. ಇದಕ್ಕೆ ನಾನೊಬ್ಬಳೇ ಹೋಣೆಯೇ ? ಊರ್ವಶೀ, ಮೇನಕಾ ರಂಭಾ, ಘೃತಾಚೀ, ಪುಂಜಿಕಸ್ಥಲಾ, ವಿಶ್ವಾಚೀ, ಸಹಜನ್ಯಾ, ಪೂರ್ವಚಿತ್ತಿ, ತಿಲೋತ್ತಮಾ, ಅಲಂಬುಷಾ ಮಿಶ್ರಕೇಶೀ, ಶಶಿಲೇಖಾ, ವಾಮನಾ ಇನ್ನೂ ಮುಂತಾದ ಅನೇಕ ರೂಪಯೌವನಶಾಲಿಗಳಾದ ಸ್ತ್ರೀಯರಿರುವರು. ಇವರೆಲ್ಲರೂ ಒಳ್ಳೆಯ ನಡುವುಳ್ಳವರಾಗಿಯೂ ಪೀನೋನ್ನತಪಯೋಧರಗಳುಳ್ಳವರಾಗಿಯೂ ಇರುವರು. ಇವರೆಲ್ಲರೂ ಕಾಮಕ್ರೀಡೆಯಲ್ಲಿ ಬಲು ಚತುರರು. ಇಂಥವರನ್ನು ಅಲ್ಲಿಗೆ ಕಳುಹಿಸು. ನಾನು ಮಾತ್ರ ಹೋಗಲಾರೆನು ಎಂದಳು.

೨೫. ಪ್ರಮ್ಲೋಚೆಯ ಮಾತನ್ನು ಕೇಳಿ ಇಂದ್ರನು ಅವರೆಲ್ಲರೂ ಇರಲಿ. ಅವರ ಮಾತು ನನಗೆ ಬೇಡ. ಈ ವಿಷಯದಲ್ಲಿ ನೀನೇ ಚತುರೆಯು.

೨೬. ನಿನ್ನ ಜೊತೆಗೆ ಮನ್ಮಥನನ್ನೂ, ವಸಂತನನ್ನೂ, ವಾಯುವನ್ನೂ ಸಹಾಯಕ್ಕೋಸ್ಕರವಾಗಿ ಕಳುಹಿಸುವೆನು. ಆದುದರಿಂದ ಎಲೌ ಸುಶ್ರೋಣಿ, ಇವರೆಲ್ಲರ ಜೊತೆಯಲ್ಲಿ ನೀನು ಆ ಕಂಡುವಿನ ಹತ್ತಿರಕ್ಕೆ ಹೋಗು ಎಂದನು.

ಶಕ್ರಸ್ಯ ವಚನಂ ಶ್ರುತ್ವಾ ತದಾ ಸಾ ಚಾರುಲೋಚನಾ ।
ಜಗಾಮಾಕಾಶಮಾರ್ಗೇಣ ತೈಃ ಸಾರ್ಧಂ ಚಾಶ್ರಮಂ ಮುನೇಃ ॥ ೨೭ ॥

ಗತ್ವಾ ಸಾ ತತ್ರ ರುಚಿರಂ ದದರ್ಶ ವನಮುತ್ತಮಂ ।
ಮುನಿಂ ಚ ದೀಪ್ತಿತಪಸಮಾಶ್ರಮಸ್ಥಮಕಲ್ಮಷಂ ॥ ೨೮ ॥

ಅಪಶ್ಯತ್ಸಾ ವನಂ ರಮ್ಯಂ ತೈಃ ಸಾರ್ಧಂ ನಂದನೋಪಮಂ ।
ಸರ್ವರ್ತುವರಪುಷ್ಪಾಢ್ಯಂ ಶಾಖಾಮೃಗಗಣಾಕುಲಂ ॥ ೨೯ ॥

ಪುಣ್ಯಂ ಪದ್ಮಬಲೋಪೇತಂ ಸಪಲ್ಲವಮಹಾಬಲಂ ।
ಶ್ರೋತ್ರರಮ್ಯಾನ್ಸುಮಧುರಾಞ್ಛಬ್ದಾನ್ಖಗಮುಖೇರಿತಾನ್ ॥ ೩೦ ॥

ಸರ್ವರ್ತುಫಲಭಾರಾಢ್ಯಾನ್ಸರ್ವರ್ತುಕುಸುಮೋಜ್ಜ್ವಲಾನ್ ।
ಅಪಶ್ಯತ್ಪಾದಪಾಂಶ್ಚೈವ ವಿಹಂಗೈರನುನಾದಿತಾನ್ ॥ ೩೧ ॥

---

೨೭. ಇಂದ್ರನ ಅಪ್ಪಣೆಯಂತೆ ಆ ಪ್ರಮ್ಲೋಚೆಯು ಮನ್ಮಥ ಮುಂತಾದವರೊಡನೆ ಆಕಾಶಮಾರ್ಗದಲ್ಲಿ ಹೊರಟು ಕಂಡುವಿನ ಆಶ್ರಮಕ್ಕೆ ಬಂದು ಸೇರಿದಳು.

೨೮. ಪ್ರಮ್ಲೋಚೆಯು ಅಲ್ಲಿಗೆ ಹೋಗಿ ಮನೋಹರವಾದ ಆ ವನವನ್ನೂ ತಪಸ್ಸಿನಿಂದ ಜ್ವಲಿಸುತ್ತಿರುವ ಆ ಋಷಿಯನ್ನೂ ಸಹ ನೋಡಿದಳು.

೨೯. ಆ ವನವು ನಂದನವನದಂತೆ ಅತಿ ಮನೋಹರವಾಗಿದ್ದಿತು. ಎಲ್ಲಾ ಋತುಗಳಲ್ಲಿಯೂ ಪುಷ್ಪಗಳು ಬಿಡುತ್ತಿದ್ದವು. ಕಪಿಗಳ ಹಿಂಡುಗಳು ಅಲ್ಲಲ್ಲಿಯೇ ಓಡಾಡುತ್ತಿದ್ದವು. ಕೊಳಗಳಲ್ಲಿ ಕಮಲಗಳು ಅತಿ ರಮ್ಯವಾಗಿ ಕಾಣುತ್ತಿದ್ದವು. ಎಲ್ಲೆಲ್ಲಿಯೂ ವೃಕ್ಷಗಳ ಚಿಗುರುಗಳು ಆನಂದವಾಗಿ ಕಾಣುತ್ತಿದ್ದವು.

೩೦-೩೧. ಪಕ್ಷಿಗಳ ಕಲಕಲಧ್ವನಿಯು ಕಿವಿಗಿಂಪನ್ನುಂಟುಮಾಡುತ್ತಿತ್ತು. ಅಲ್ಲಿರುವ ವೃಕ್ಷಗಳಲ್ಲಿ ಯಾವಾಗಲೂ ಫಲಪುಷ್ಪಗಳು ಬಿಡುತ್ತಿದ್ದವು. ಅನೇಕ ವಿಧವಾದ ಪಕ್ಷಿಗಳು ಮರಗಳ ಮೇಲೆ ಕುಳಿತು ಸುಮಧುರವಾಗಿ ಹಾಡುತ್ತಿದ್ದವು.

ಆಮ್ರಾನಾಮ್ರಾತಕಾನ್ಭವ್ಯಾನ್ನಾರಿಕೇರಾನ್ಸತಿಂದುಕಾನ್ ।
ಅಥ ಬಿಲ್ವಾಂಸ್ತಥಾ ಜೀವಾನ್ದಾಡಿಮಾನ್ಬೀಜಪೂರಕಾನ್ ॥ ೩೨ ॥

ಪನಸಾಂಲ್ಲಕುಚಾನ್ನೀಪಾಞ್ಶಿರೀಷಾನ್ಸುಮನೋಹರಾನ್ ।
ಪಾರಾವತಾಂಸ್ತಥಾ ಕೋಲಾನರಿಮೇದಾನ್ಸವೇತಸಾನ್ ॥ ೩೩ ॥

ಭಲ್ಲಾತಕಾನಾಮಲಕಾಞ್ಶತಪರ್ಣಾಂಶ್ಚ ಕಿಂಶುಕಾನ್ ।
ಇಙ್ಗುದಾನ್ಕರವೀರಾಂಶ್ಚ ಹರೀತಕಿವಿಭೀತಕಾನ್ ॥ ೩೪ ॥

ಏತಾನನ್ಯಾಂಶ್ಚ ಸಾ ವೃಕ್ಷಾನ್ದದರ್ಶ ಪೃಥುಲೋಚನಾ ।
ತಥೈವಾಶೋಕಪುನ್ನಾಗಕೇತಕೀಬಕುಲಾನಥ ॥ ೩೫ ॥

ಪಾರಿಜಾತಾನ್ಕೋವಿದಾರಾನ್ಮಂದಾರೇಂದೀವರಾಂಸ್ತಥಾ ।
ಪಾಟಲಾಃ ಪುಷ್ಪಿತಾ ರಮ್ಯಾ ದೇವದಾರುದ್ರುಮಾಂಸ್ತಥಾ ॥ ೩೬ ॥

ಶಾಲಾಂಸ್ತಾಲಾಂಸ್ತಮಾಲಾಂಶ್ಚ ನಿಚುಲಾಂಲ್ಲೋಮಕಾಂಸ್ತಥಾ ।
ಅನ್ಯಾಂಶ್ಚ ಪಾದಪಶ್ರೇಷ್ಠಾನಪಶ್ಯತ್ಫಲಪುಷ್ಪಿತಾನ್ ॥ ೩೭ ॥

---

೩೨-೩೪. ಮಾವು, ಅಮಟೆ, ತೆಂಗು, ತೂಪರೆ ಬಿಲ್ವ, ಹೊನ್ನೆ, ದಾಡಿಮ ಸೀಬೆ, ಹಲಸು ಕಿತ್ತಳೆ, ಈಚಲು, ಶಿರೀಷ, ಜ್ಯೋತಿಷ್ಮತೀ, ಮೆಣಸು, ಕಗ್ಗಲಿ, ಗೇರು, ನೆಲ್ಲಿ, ಮುತ್ತುಗ, ಇಂಗುವ ಕರವೀರ, ಅಳಲೆ ಇವೇ ಮೊದಲಾದ ರಮ್ಯ ವಾದ ವೃಕ್ಷಗಳನ್ನು ನೋಡುತ್ತಾ ಆ ವನದಲ್ಲಿ ಸಂಚರಿಸುತ್ತಿದ್ದಳು.

೩೫-೩೭. ಅಶೋಕ, ಪುನ್ನಾಗ, ತಾಳೆ, ಬಕುಳ, ಪಾರಿಜಾತ, ಕೋವಿ ದಾರ, ಮಂದಾರ, ನೈದಿಲೆ, ಪಾಟಲ ಮುಂತಾದ ಹೂಗಳನ್ನೂ ದೇವದಾರು, ತಾಲ, ಹೊಂಗೆ, ನಿಚುಲ, ಮುಂತಾದ ಇನ್ನೂ ಅನೇಕ ಶ್ರೇಷ್ಠವಾದ ಮರ ಗಳನ್ನು ನೋಡುತ್ತಾ ಸಂಚರಿಸುತ್ತಿದ್ದಳು.

ಚಕೋರೈಃ ಶತಪತ್ರೈಶ್ಚ ಭೃಂಗರಾಜೈಸ್ತಥಾ ಶುಕೈಃ ।
ಕೋಕಿಲೈಃ ಕಲವಿಂಕೈಶ್ಚ ಹಾರೀತೈರ್ಜೀವಜೀವಕೈಃ ॥ ೩೮ ॥

ಪ್ರಿಯಪುತ್ರೈಶ್ಚಾತಕೈಶ್ಚ ತಥಾನ್ಯೈರ್ವಿವಿಧೈಃ ಖಗೈಃ ।
ಶ್ರೋತ್ರರಮ್ಯಂ ಸುಮಧುರಂ ಕೂಜದ್ಭಿಶ್ಚಾಪ್ಯಧಿಷ್ಠಿತಂ ॥ ೩೯ ॥

ಸರಾಂಸಿ ಚ ಮನೋಜ್ಞಾನಿ ಪ್ರಸನ್ನಸಲಿಲಾನಿ ಚ ।
ಕುಮುದೈಃ ಪುಂಡರೀಕೈಶ್ಚ ತಥಾ ನೀಲೋತ್ಪಲೈಃ ಶುಭೈಃ ॥ ೪೦ ॥

ಕಲ್ಹಾರೈಃ ಕಮಲೈಶ್ಚೈವ ಆಚಿತಾನಿ ಸಮಂತತಃ ।
ಕಾದಂಬೈಶ್ಚಕ್ರವಾಕೈಶ್ಚ ತಥೈವ ಜಲಕುಕ್ಕುಟೈಃ ॥ ೪೧ ॥

ಕಾರಂಡವೈರ್ಬಕೈರ್ಹಂಸೈಃ ಕೂರ್ಮೈರ್ಮದ್ಗುಭಿರೇವ ಚ ।
ಏತೈಶ್ಚಾನ್ಯೈಶ್ಚ ಕೀರ್ಣಾನಿ ಸಮಂತಾಜ್ಜಲಚಾರಿಭಿಃ ॥ ೪೨ ॥

ಕ್ರಮೇಣೈವ ತಥಾ ಸಾ ತು ವನಂ ಬಭ್ರಾಮ ತೈಃ ಸಹ ।
ಏವಂ ದೃಷ್ಟ್ವಾ ವನಂ ರಮ್ಯಂ ತೈಃ ಸಾರ್ಧಂ ಪರಮಾದ್ಭುತಂ ॥ ೪೩ ॥

---

೩೮-೩೯. ಚಕೋರ, ಶತಪತ್ರ, ಭೃಂಗರಾಜ, ಗಿಣಿ, ಕೋಕಿಲ, ಗುಬ್ಬಿಗಳು, ಇವೇ ಮೊದಲಾದ ಅನೇಕ ಪಕ್ಷಿಗಳು ಕಿವಿಗಿಂಪಾಗಿ ಧ್ವನಿ ಮಾಡುತ್ತಿದ್ದವು.

೪೦. ಅಲ್ಲಿರುವ ಸರೋವರಗಳೆಲ್ಲವೂ ಬಹಳ ರಮ್ಯವಾಗಿಯೂ ಸ್ವಚ್ಛವಾದ ನೀರುಳ್ಳವುಗಳಾಗಿಯೂ ಇದ್ದವು. ಆ ಸರೋವರಗಳಲ್ಲಿ ನೈದಿಲೆಗಳೂ, ಬಿಳಿಯ ಕಮಲಗಳೂ, ನೀಲೋತ್ಪಲಗಳೂ, ಕಲ್ಹಾರಗಳೂ ಮುಂತಾದ ಪುಷ್ಪಗಳು ಇದ್ದು ರಮ್ಯವಾಗಿ ಕಾಣಿಸುತ್ತಿದ್ದವು.

೪೧-೪೨. ಆ ವನದಲ್ಲಿ ಹಂಸಗಳು, ಚಕ್ರವಾಕಗಳು, ನೀರುಕೋಳಿಗಳು, ಕೊಕ್ಕರೆಗಳು, ಆಮೆಗಳು, ಇವೇ ಮೊದಲಾದುವುಗಳು ಜಲವಸತಿಗಳಲ್ಲಿ ಇರುತ್ತಿದ್ದವು.

೪೩. ಈರೀತಿಯಾಗಿ ರಮ್ಯವೂ, ಆಶ್ಚರ್ಯಕರವೂ ಆಗಿರುವ ಆ ಕಂಡುವಿನ ಆಶ್ರಮಪ್ರದೇಶಗಳನ್ನು ನೋಡುತ್ತಾ ಪ್ರವ್ಲೋಚೆಯು ಮನ್ಮಥ ಮುಂತಾದವರೊಡನೆ ಅಲ್ಲಲ್ಲಿ ಸಂಚರಿಸುತ್ತಿದ್ದಳು.

ವಿಸ್ಮಯೋತ್ಫುಲ್ಲನಯನಾ ಸಾ ಬಭೂವ ವರಾಂಗನಾ ।
ಪ್ರೋವಾಚ ವಾಯುಂ ಕಾಮಂ ಚ ವಸಂತಂ ಚ ದ್ವಿಜೋತ್ತಮಾಃ ॥ ೪೪ ॥

॥ ಪ್ರಮ್ಲೋಚೋವಾಚ ॥

ಕುರುಧ್ವಂ ಮಮ ಸಾಹಾಯ್ಯಂ ಯೂಯಂ ಸರ್ವೇ ಪೃಥಕ್ಪೃಥಕ್ ।

॥ ಬ್ರಹ್ಮೋವಾಚ ॥

ಏವಮುಕ್ತ್ವಾ ತದಾ ಸಾ ತು ತಥೇತ್ಯುಕ್ತ್ವಾ ಸುರೈರ್ದ್ವಿಜಾಃ ।
ಪ್ರತ್ಯುವಾಚಾದ್ಯ ಯಾಸ್ಯಾಮಿ ಯತ್ರಾಸೌ ಸಂಸ್ಥಿತೋ ಮುನಿಃ ॥ ೪೬ ॥

ಅಸ್ಯ ತೇ ದೇಹಯಂತಾರಂ ಪ್ರಯುಕ್ತೇಂದ್ರಿಯವಾಜಿನಂ ।
ಸ್ಮರಶಸ್ತ್ರಗಲದ್ರಶ್ಮಿಂ ಕರಿಷ್ಯಾಮಿ ಕುಸಾರಥಿಂ ॥ ೪೭ ॥

ಬ್ರಹ್ಮಾ ಜನಾರ್ದನೋ ವಾಪಿ ಯದಿ ವಾ ನೀಲಲೋಹಿತಃ ।
ತಥಾಪ್ಯದ್ಯ ಕರಿಷ್ಯಾಮಿ ಕಾಮಬಾಣಕ್ಷತಾಂತರಂ ॥ ೪೮ ॥

---

೪೪-೪೫. ನಯನಮನೋಹರಿಯಾದ ಆ ಸುಂದರಿಯು ವಾಯು, ಕಾಮ, ವಸಂತ ಮುಂತಾದುವರನ್ನು ಕುರಿತು ನೀವೆಲ್ಲರೂ ಈಗ ನನಗೆ ಸಹಾಯಮಾಡಬೇಕು ಎಂದಳು.

೪೬. ಪ್ರಮ್ಲೋಚೆಯ ಮಾತನ್ನು ಕೇಳಿ ಅವರೆಲ್ಲರೂ ಹಾಗೆಯೇ ಆಗಲೆಂದರು. ಪುನಃ ಪ್ರಮ್ಲೋಚೆಯು–ಇನ್ನು ನಾನು ಆ ಋಷಿಯ ಸಮೀಪಕ್ಕೆ ಹೊರಡುವೆನು.

೪೭–೪೮. ಇಂದ್ರಿಯಗಳೆಂಬ ಕುದುರೆಗಳನ್ನು ಬಿಗಿಯಾಗಿ ಕಟ್ಟಿ ದೇಹವೆಂಬ ರಥವನ್ನು ನಡೆಸುತ್ತಿರುವ ಆ ಋಷಿಯನ್ನು ಈಗ ಮನ್ಮಥನ ಬಾಣಗಳಿಂದ ಆ ಕುದುರೆಗಳಿಗೆ ಕಟ್ಟಿರುವ ಹಗ್ಗವು ಹರಿದುಹೋಗುವಂತೆ ಮಾಡಿ ದುಷ್ಟ ಸಾರಥಿಯನ್ನಾಗಿ ಮಾಡುವೆನು. ಇದಕ್ಕೆ ತಡೆಯಾಗಿ ಬ್ರಹ್ಮನೇ ಬರಲಿ, ವಿಷ್ಣುವೇ ಬರಲಿ ಅಷ್ಟೇಕೆ ಸಾಕ್ಷಾತ್ ಈಶ್ವರನೇ ಬರಲಿ ಹೆದರುವುದಿಲ್ಲ. ಈಗವನನ್ನು ಮನ್ಮಥನ ಬಾಣಗಳಿಂದ ಗಾಯಗೊಳಿಸುವೆನು ಎಂದಳು.

ಇತ್ಯುಕ್ತ್ವಾ ಪ್ರಯಯೌ ಸಾರ್ಥೆ ಯತ್ರಾಸೌ ತಿಷ್ಠತೇ ಮುನಿಃ ।
ಮುನೇಸ್ತಪಃಪ್ರಭಾವೇಣ ಪ್ರಶಾಂತಶ್ವಾಪದಾಶ್ರಮಂ ॥ ೪೯ ॥

ಸಾ ಪುಂಸ್ಕೋಕಿಲಮಾಧುರ್ಯೇ ನದೀತೀರೇ ವ್ಯವಸ್ಥಿತಾ ।
ಸ್ತೋಕಮಾತ್ರಂ ಸ್ಥಿತಾ ತಸ್ಮಾದಗಾಯತ ವರಾಪ್ಸರಾಃ ॥ ೫೦ ॥

ತತೋ ವಸಂತಃ ಸಹಸಾ ಬಲಂ ಸಮಕರೋತ್ತದಾ ।
ಕೋಕಿಲಾರಾವಮಧುರಮಕಾಲಿಕಮನೋಹರಂ ॥ ೫೧ ॥

ವವೌ ಗಂಧವಹಶ್ಚೈವ ಮಲಯಾದ್ರಿನಿಕೇತನಃ ।
ಪುಷ್ಪಾನುಚ್ಚಾವಚಾನ್ಮೇಧ್ಯಾನ್ಪಾತಯಂಶ್ಚ ಶನೈಃ ಶನೈಃ ॥ ೫೨ ॥

ಪುಷ್ಪಬಾಣಧರಶ್ಚೈವ ಗತ್ವಾ ತಸ್ಯ ಸಮೀಪತಃ ।
ಮುನೇಶ್ಚ ಕ್ಷೋಭಯಾಮಾಸ ಕಾಮಸ್ತಸ್ಯಾಪಿ ಮಾನಸಂ ॥ ೫೩ ॥

---

೪೯. ಈರೀತಿಯಾಗಿ ಹೇಳಿ ಪ್ರಮ್ಲೋಚೆಯು ಆ ಮುನಿಯು ತಪಸ್ಸಿಗೆ ಕುಳಿತಿದ್ದ ಸ್ಥಳಕ್ಕೆ ಹೋದಳು. ಅಲ್ಲಿ ಆ ಋಷಿಯ ಪ್ರಭಾವದಿಂದ ಪ್ರಾಣಿಗಳೆಲ್ಲವೂ ತಮ್ಮ ತಮ್ಮ ವೈರವನ್ನು ಬಿಟ್ಟು ಶಾಂತವಾಗಿ ವ್ಯವಹರಿಸುತ್ತಿದ್ದವು.

೫೦. ನದೀ ತೀರದಲ್ಲಿ ಕೋಕಿಲೆಗಳೆಲ್ಲರೂ ಗಾನಮಾಡುತ್ತಿರಲು ಪ್ರಮ್ಲೋಚೆಯು ಒಂದುಕ್ಷಣ ಮೌನವಾಗಿದ್ದು ಅನಂತರ ಗೀತವನ್ನು ಹಾಡಲು ಪ್ರಾರಂಭಿಸಿದಳು.

೫೧. ಆಗ ವಸಂತನ ಪ್ರಭಾವದಿಂದ ಎಲ್ಲೆಲ್ಲಿಯೂ ವಸಂತ ಋತುವು ಪ್ರಾಪ್ತವಾಯಿತು. ಅಂತೆಯೇ ಕೋಗಿಲೆಯೂ ಸುಮಧುರವಾಗಿ ಕೂಗಲು ಪ್ರಾರಂಭಿಸಿತು.

೫೨. ಮಲಯಪರ್ವತ ಮೂಲಕ ಮಂದಮಾರುತನು ಬೀಸಿದನು. ಅಕಾಲದಲ್ಲಿ ಬಿಟ್ಟಿರುವ ಪುಷ್ಪಗಳನ್ನು ಕೆಡವುತ್ತಾ ನಿಧಾನವಾಗಿ ಬೀಸಿದನು.

೫೩. ಮನ್ಮಥನೂ ಸಹ ಕಂಡುವಿನ ಸಮೀಪಕ್ಕೆ ಹೋಗಿ ಅವನ ಮನಸ್ಸು ಚಂಚಲವಾಗುವಂತೆ ಮಾಡಿದನು.

ತತೋ ಗೀತಧ್ವನಿಂ ಶ್ರುತ್ವಾ ಮುನಿರ್ವಿಸ್ಮಿತಮಾನಸಃ ।
ಜಗಾಮ ಯತ್ರ ಸಾ ಸುಭ್ರೂಃ ಕಾಮಬಾಣಪ್ರಪೀಡಿತಃ ॥ ೫೪ ॥

ದೃಷ್ಟ್ವಾ ತಾಮಾಹ ಸಂದೃಷ್ಟ್ವೋ ವಿಸ್ಮಯೋತ್ಫುಲ್ಲಲೋಚನಃ ।
ಭ್ರಷ್ಟೋತ್ತರೀಯೋ ವಿಕಲಃ ಪುಲಕಾಂಚಿತವಿಗ್ರಹಃ ॥ ೫೫ ॥

॥ ಋಷಿರುವಾಚ ॥

ಕಾಸಿ ಕಸ್ಯಾಸಿ ಸುಶ್ರೋಣಿ ಸುಭಗೇ ಚಾರುಹಾಸಿನಿ ।
ಮನೋ ಹರಸಿ ಮೇ ಸುಭ್ರು ಬ್ರೂಹಿ ಸತ್ಯಂ ಸುಮಧ್ಯಮೇ ॥ ೫೬ ॥

॥ ಪ್ರಮ್ಲೋಚೋವಾಚ ॥

ತವ ಕರ್ಮಕರಾ ಚಾಹಂ ಪುಷ್ಪಾರ್ಥಮಹಮಾಗತಾ ।
ಆದೇಶಂ ದೇಹಿ ಮೇ ಕ್ಷಿಪ್ರಂ ಕಿಂ ಕರೋಮಿ ತವಾಜ್ಞಯಾ ॥ ೫೭ ॥

---

೫೪. ಪ್ರಮ್ಲೋಚೆಯು ಹಾಡುತ್ತಿರುವ ಗೀತಧ್ವನಿಯನ್ನು ಕೇಳಿ ಕಂಡುವು ಆಶ್ಚರ್ಯಗೊಂಡನು. ಹಾಗೂ ಮನ್ಮಥನ ಬಾಣಗಳಿಂದ ಪೀಡಿತನಾಗಿ ಆ ಸುಂದರಿಯು ಇರುವ ಸ್ಥಳಕ್ಕೆ ಹೋಗಿ,

೫೫. ಪ್ರಮ್ಲೋಚಯನ್ನು ನೋಡಿ ಬಹಳ ವಿಸ್ಮಿತನಾದನು. ಮನ್ಮಥೋದ್ರಿಕ್ತನಾದನು. ಮನಸ್ಸು ಚಂಚಲವಾಯಿತು. ಶರೀರದಲ್ಲೆಲ್ಲಾ ರೋಮಾಂಚವುಂಟಾಯಿತು. ಅವನು ಹೊದ್ದಿದ್ದ ಉತ್ತರೀಯವು ಬಿದ್ದುಹೋಯಿತು. ಈರೀತಿ ಮನ್ಮಥಾವಸ್ಥೆಗೆ ಒಳಗಾಗಿ ಅವಳನ್ನು ಕುರಿತು

೫೬. ಎಲೌ ಸುಂದರಿ, ನೀನಾರು? ಎಲ್ಲಿಯವಳು? ಅದೃಷ್ಟಶಾಲಿಯಾದ ನೀನು ಯಾರ ಸಂಬಂಧೀಕಳು? ಮನೋಹರವಾಗಿ ನಗುತ್ತಾ ನನ್ನ ಮನಸ್ಸನ್ನೇ ಅಪಹರಿಸಿರುವೆ. ನಿಜವನ್ನು ಹೇಳು. ಎಂದನು.

೫೭. ಅದಕ್ಕೆ ಪ್ರಮ್ಲೋಚೆಯು—ನಾನು ನಿನ್ನ ಸೇವಕಿಯು. ಇಲ್ಲೀ ಹೂವು ಕೊಯ್ಯಲು ಬಂದಿದ್ದೆನು. ನೀನು ಏನಪ್ಪಣೆ ಮಾಡಿದರೂ ಮಾಡಲು ಸಿದ್ಧಳಾಗಿರುವೆನು ಎಂದಳು.

॥ ವ್ಯಾಸ ಉವಾಚ ॥

ಶ್ರುತ್ವೈವಂ ವಚನಂ ತಸ್ಯಾಸ್ತ್ಯಕ್ತ್ವಾ ಧೈರ್ಯಂ ವಿಮೋಹಿತಃ ।
ಆದಾಯ ಹಸ್ತೇ ತಾಂ ಬಾಲಾಂ ಪ್ರವಿವೇಶ ಸ್ವಮಾಶ್ರಮಂ ॥ ೫೮ ॥

ತತಃ ಕಾಮಶ್ಚ ವಾಯುಶ್ಚ ವಸಂತಶ್ಚ ದ್ವಿಜೋತ್ತಮಾಃ ।
ಜಗ್ಮುರ್ಯಥಾಗತಂ ಸರ್ವೇ ಕೃತಕೃತ್ಯಾಸ್ತ್ರಿವಿಷ್ಟಪಂ ॥ ೫೯ ॥

ಶಶಂಸುಶ್ಚ ಹರಿಂ ಗತ್ವಾ ತಸ್ಯಾಸ್ತಸ್ಯ ಚ ಚೇಷ್ಟಿತಂ ।
ಶ್ರುತ್ವಾ ಶಕ್ರಸ್ತದಾ ದೇವಾಃ ಪ್ರೀತಾಃ ಸುಮನಸೋಽಭವನ್ ॥ ೬೦ ॥

ಸ ಚ ಕಂಡುಸ್ತಯಾ ಸಾರ್ಧಂ ಪ್ರವಿಶನ್ನೇವ ಚಾಶ್ರಮಂ ।
ಆತ್ಮನಃ ಪರಮಂ ರೂಪಂ ಚಕಾರ ಮದನಾಕೃತಿ ॥ ೬೧ ॥

ರೂಪಯೌವನಸಂಪನ್ನಮತೀವ ಸುಮನೋಹರಂ ।
ದಿವ್ಯಾಲಂಕಾರಸಂಯುಕ್ತಂ ಷೋಡಶವತ್ಸರಾಕೃತಿ ॥ ೬೨ ॥

---

೫೮. ಪ್ರಮ್ಲೋಚೆಯಾಡಿದುದನ್ನು ಕೇಳಿ ಆ ಕಂಡುಋಷಿಯು ಅವಳಲ್ಲಿ ಮೋಹಿತನಾದನು. ಅವನ ಧೈರ್ಯವು ನಾಶವಾಯಿತು. ಆಮೇಲೆ ಪ್ರಮ್ಲೋಚೆಯ ಕೈಯನ್ನು ಹಿಡಿದುಕೊಂಡು ಅವಳನ್ನು ಆಶ್ರಮದೊಳಕ್ಕೆ ಕರೆದು ಕೊಂಡು ಹೋದನು.

೫೯. ಆಮೇಲೆ ಕಾಮನೂ, ವಾಯು, ವಸಂತ ಇವರೆಲ್ಲರೂ ತಮ್ಮ ಕಾರ್ಯವು ನೆರವೇರಿತೆಂದು ತಿಳಿದು ದೇವಲೋಕಕ್ಕೆ ತೆರಳಿದರು.

೬೦. ಅವರೆಲ್ಲರೂ ಇಂದ್ರನ ಹತ್ತಿರಕ್ಕೆ ಹೋಗಿ ಇಂದ್ರನ ಉಪಾಯ ವನ್ನೂ ಅದಕ್ಕೆ ಸರಿಯಾಗಿ ಪ್ರಮ್ಲೋಚೆಯು ಆಚರಿಸಿದುದನ್ನೂ ಹೊಗಳಿದರು. ಅದನ್ನು ಕೇಳಿ ಇಂದ್ರನೂ, ದೇವತೆಗಳೂ ಸಂತೋಷಗೊಂಡರು.

೬೧. ಕಂಡುವು ಪ್ರಮ್ಲೋಚೆಯೊಡನೆ ಆಶ್ರಮವನ್ನು ಪ್ರವೇಶಿಸಿದ ಕೂಡಲೇ ತನ್ನ ತಾಪಸರೂಪವನ್ನು ಬಿಟ್ಟು ಮನ್ಮಥನಂತೆ ದಿವ್ಯ ರೂಪವನ್ನು ಧರಿಸಿದನು.

೬೨-೬೩. ತನ್ನ ತಪೋಮಹಿಮೆಯಿಂದ ಕಂಡುವು ಸುಂದರನಾದ ಯುವಕನಾದನು. ದಿವ್ಯವಾದ ಅಲಂಕಾರಗಳಿಂದ ಅಲಂಕರಿಸಿಕೊಂಡನು.

**ದಿವ್ಯವಸ್ತ್ರಧರಂ ಕಾಂತಂ ದಿವ್ಯಸ್ರಗ್ಗಂಧಭೂಷಿತಂ ।**
**ಸರ್ವೋಪಭೋಗಸಂಪನ್ನಂ ಸಹಸಾ ತಪಸೋ ಬಲಾತ್ ॥ ೬೩ ॥**

**ದೃಷ್ಟ್ವಾ ಸಾ ತಸ್ಯ ತದ್ವೀರ್ಯಂ ಪರಂ ವಿಸ್ಮಯಮಾಗತಾ ।**
**ಅಹೋಽಸ್ಯ ತಪಸೋ ವೀರ್ಯಮಿತ್ಯುಕ್ತ್ವಾ ಮುದಿತಾಭವತ್ ॥ ೬೪ ॥**

**ಸ್ನಾನಂ ಸಂಧ್ಯಾಂ ಜಪಂ ಹೋಮಂ ಸ್ವಾಧ್ಯಾಯಂ ದೇವತಾರ್ಚನಂ ।**
**ವ್ರತೋಪವಾಸನಿಯಮಂ ಧ್ಯಾನಂ ಚ ಮುನಿಸತ್ತಮಾಃ ॥ ೬೫ ॥**

**ತ್ಯಕ್ತ್ವಾ ಸ ರೇಮೇ ಮುದಿತಸ್ತಯಾ ಸಾರ್ಧಮಹರ್ನಿಶಂ ।**
**ಮನ್ಮಥಾವಿಷ್ಟಹೃದಯೋ ನ ಬುಬೋಧ ತಪಃಕ್ಷಯಂ ॥ ೬೬ ॥**

**ಸಂಧ್ಯಾರಾತ್ರಿದಿವಾಪಕ್ಷಮಾಸರ್ತ್ವಯನಹಾಯನಂ ।**
**ನ ಬುಬೋಧ ಗತಂ ಕಾಲಂ ವಿಷಯಾಸಕ್ತಮಾನಸಃ ॥ ೬೭ ॥**

---

ಹದಿನಾರುವರ್ಷದ ತರುಣನಾದನು. ಮನೋಹರವಾದ ಬೆಲೆಬಾಳುವ ವಸ್ತ್ರಗಳನ್ನು ಧರಿಸಿ ಬಗೆಬಗೆಯ ಪರಿಮಳದ್ರವ್ಯಗಳನ್ನು ಹಚ್ಚಿಕೊಂಡನು. ಸರ್ವೋಪಭೋಗಸಂಪನ್ನನಾದನು. ಈರೀತಿಯಾಗಿ ಒಂದು ಕ್ಷಣದಲ್ಲಿ ತನ್ನ ತಪೋಮಹಿಮೆಯಿಂದ ಮಾರ್ಪಾಡಾದನು.

೬೪. ಪ್ರಮ್ಲೋಚೆಯು, ಕಂಡುವನ್ನೂ ಅವನ ತಪೋಮಹಿಮೆಯನ್ನೂ ನೋಡಿ "ಅಬ್ಬಾ, ಇವನ ತಪೋಮಹಿಮೆಯು ಎಂತಹುದು" ಎಂದು ಹೇಳುತ್ತಾ ಆಶ್ಚರ್ಯಗೊಂಡಳು.

೬೫-೬೬. ಮನ್ಮಥೋದ್ರಿಕ್ತನಾದ ಆ ಕಂಡುವು, ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ವೇದಾಧ್ಯಯನ, ದೇವತಾರ್ಚನ, ವ್ರತ, ಉಪವಾಸ, ನಿಯಮ, ಧ್ಯಾನ ಇವುಗಳನ್ನೆಲ್ಲಾ ಬಿಟ್ಟುಬಿಟ್ಟನು. ಯಾವಾಗಲೂ ಅವಳೊಡನೆ ರಮಿಸುತ್ತಾ ತನ್ನ ತಪಸ್ಸು ಕ್ಷಯಿಸಿಹೋದುದನ್ನೂ ಲೆಕ್ಕಿಸಲಿಲ್ಲ.

೬೭. ಸಂಧ್ಯಾಕಾಲಗಳು, ರಾತ್ರಿ, ಹಗಲು, ಪಕ್ಷ, ಮಾಸ, ಋತು, ಅಯನ, ವರ್ಷ ಇವು ಎಷ್ಟೋ ಕಳೆದುಹೋದವು. ಸ್ತ್ರೀಸಕ್ತನಾದ ಕಂಡುವಿಗೆ ಮಾತ್ರ ಯಾವುದೂ ಗೊತ್ತಾಗಲಿಲ್ಲ.

**ಸಾ ಚ ತಂ ಕಾಮಜೈರ್ಭಾವೈರ್ವಿದಗ್ಧಾ ರಹಸಿ ದ್ವಿಜಾಃ ।**
**ವಶಯಾಮಾಸ ಸುಶ್ರೋಣಿಃ ಪ್ರಲಾಪಕುಶಲಾ ತದಾ ॥ ೬೮ ॥**

**ಏವಂ ಕಂಡುಸ್ತಯಾ ಸಾರ್ಧಂ ವರ್ಷಾಣಾಮಧಿಕಂ ಶತಂ ।**
**ಅತಿಷ್ಠನ್ಮನ್ದರದ್ರೋಣ್ಯಾಂ ಗ್ರಾಮ್ಯಧರ್ಮರತೋ ಮುನಿಃ ॥ ೬೯ ॥**

**ಸಾ ತಂ ಪ್ರಾಹ ಮಹಾಭಾಗಂ ಗಂತುಮಿಚ್ಛಾಮ್ಯಹಂ ದಿವಂ ।**
**ಪ್ರಸಾದಸುಮುಖೋ ಬ್ರಹ್ಮನ್ನನುಜ್ಞಾತುಂ ತ್ವಮರ್ಹಸಿ ॥ ೭೦ ॥**

**ತಯೈವಮುಕ್ತಃ ಸ ಮುನಿಸ್ತಸ್ಯಾಮಾಸಕ್ತಮಾನಸಃ ।**
**ದಿನಾನಿ ಕತಿಚಿದ್ಭದ್ರೇ ಸ್ಥೀಯತಾಮಿತ್ಯಭಾಷತ ॥ ೭೧ ॥**

**ಏವಮುಕ್ತಾ ತತಸ್ತೇನ ಸಾಗ್ರಂ ವರ್ಷಶತಂ ಪುನಃ ।**
**ಬುಭುಜೇ ವಿಷಯಾಂಸ್ತನ್ವೀ ತೇನ ಸಾರ್ಧಂ ಮಹಾತ್ಮನಾ ॥ ೭೨ ॥**

---

೬೮. ಪ್ರಮ್ಲೋಚೆಯೂ ಸಹ ಹಾವಭಾವವಿಲಾಸಗಳಿಂದ ರಹಸ್ಯದಲ್ಲಿ ಆ ಕಂಡುವಿನೊಡನೆ ರಮಿಸಿದಳು. ಅವನೊಡನೆ ವಿವಿಧವಾಗಿ ಮಾತನಾಡುತ್ತಾ ತನ್ನ ವಶನನ್ನಾಗಿ ಮಾಡಿಕೊಂಡಳು.

೬೯. ಈರೀತಿಯಾಗಿ ಕಂಡುವು ಅವಳೊಡನೆ ನೂರುವರ್ಷಗಳಿಗಿಂತ ಅಧಿಕವಾಗಿ ವಿಹರಿಸಿದನು. ಮಂದರಪರ್ವತದ ಕಂದರಪ್ರದೇಶಗಳಲ್ಲಿ ತೀರಾ ಗ್ರಾಮ್ಯಧರ್ಮವನ್ನವಲಂಬಿಸಿ ಅವಳೊಡನೆ ಕ್ರೀಡಿಸಿದನು.

೭೦. ಹೀಗಿರುತ್ತಿರಲು ಒಂದುಸಾರಿ ಪ್ರಮ್ಲೋಚೆಯು ಕಂಡುವನ್ನು ಕುರಿತು 'ಭಗವನ್ ಇನ್ನು ನಾನು ಸ್ವರ್ಗಕ್ಕೆ ಹೋಗಲಿರುವೆನು. ಅನುಗ್ರಹ ವಿಟ್ಟು ಅಪ್ಪಣೆಯನ್ನು ಕೊಡಿ' ಎಂದು ಕೇಳಿದಳು.

೭೧. ಪ್ರಮ್ಲೋಚೆಯ ಮಾತನ್ನು ಕೇಳಿ ಕಂಡುವು ಅವಳಲ್ಲಿಯೇ ತನ್ನ ಮನಸ್ಸು ಆಸಕ್ತವಾಗಿದ್ದುದರಿಂದ ಅವಳನ್ನು ಬಿಡಲಾರದೆ 'ಎಲೌ ಮಂಗಳೇ ಇನ್ನು ಕೆಲವುದಿನಗಳು ಮಾತ್ರ ಇಲ್ಲಿರು' ಎಂಬುದಾಗಿ ಹೇಳಿದನು.

೭೨. ಕಂಡುವಿನ ಅಭಿಮತದಂತೆ ಪ್ರಮ್ಲೋಚೆಯು ಪುನಃ ನೂರು ವರ್ಷಗಳವರೆಗೆ ಅವನ ಜೊತೆಯಲ್ಲಿದ್ದು ವಿಷಯೋಪಭೋಗಗಳನ್ನನುಭವಿಸಿದಳು.

ಅನುಜ್ಞಾಂ ದೇಹಿ ಭಗವನ್ವ್ರಜಾಮಿ ತ್ರಿದಶಾಲಯಂ ।
ಉಕ್ತಸ್ತಯೇತಿ ಸ ಪುನಃ ಸ್ಥೀಯತಾಮಿತ್ಯಭಾಷತ ॥ ೭೩ ॥

ಪುನರ್ಗತೇ ವರ್ಷಶತೇ ಸಾಧಿಕೇ ಸಾ ಶುಭಾನನಾ ।
ಯಾಮ್ಯಹಂ ತ್ರಿದಿವಂ ಬ್ರಹ್ಮನ್ಪ್ರಣಯಸ್ಮಿತಶೋಭನಂ ॥ ೭೪ ॥

ಉಕ್ತಸ್ತಯೈವಂ ಸ ಮುನಿಃ ಪುನರಾಹಾಯತೇಕ್ಷಣಾಂ ।
ಇಹಾಸ್ಯತಾಂ ಮಯಾ ಸುಭ್ರು ಚಿರಂ ಕಾಲಂ ಗಮಿಷ್ಯಸಿ ॥ ೭೫ ॥

ತಚ್ಛಾಪಭೀತಾ ಸುಶ್ರೋಣೀ ಸಹ ತೇನರ್ಷಿಣಾ ಪುನಃ ।
ಶತದ್ವಯಂ ಕಿಂಚಿದೂನಂ ವರ್ಷಾಣಾಂ ಸಮತಿಷ್ಠತ ॥ ೭೬ ॥

ಗಮನಾಯ ಮಹಾಭಾಗೋ ದೇವರಾಜನಿವೇಶನಂ ।
ಪ್ರೋಕ್ತಃ ಪ್ರೋಕ್ತಸ್ತಯಾ ತನ್ವ್ಯಾ ಸ್ಥೀಯತಾಮಿತ್ಯಭಾಷತ ॥ ೭೭ ॥

---

೭೩. ಅನಂತರ ಅವಳು—ಭಗವನ್, ಈಗಲಾದರೂ ದೇವಲೋಕಕ್ಕೆ ಹೋಗಲು ಅಪ್ಪಣೆಯನ್ನು ಕೊಡು ಎಂದು ಕೇಳಲು ಕಂಡು ಇನ್ನೂ ಸ್ವಲ್ಪಕಾಲ ಇಲ್ಲಿಯೇ ಇರು ಎಂದು ಹೇಳಿದನು.

೭೪. ಪುನಃ ಒಂದುನೂರು ವರ್ಷಗಳು ಕಳೆದವು. ಆಮೇಲೆ ಪ್ರಮ್ಲೋಚೆಯು ;' ನಾನು ದೇವಲೋಕಕ್ಕೆ ಹೋಗುವೆನೆಂದು ಹೇಳಿದಳು. ಈ ಮಾತನ್ನು ಕೇಳಿ ಕಂಡುವು ಆ ವಿಶಾಲಾಕ್ಷಿಯನ್ನು ಕುರಿತು

೭೫–೭೬. 'ಎಲೌ ಸುಂದರಿ, ನೀನು ಹೋಗಕೂಡದು. ನನ್ನೊಡನೆ ಬಹುಕಾಲದವರೆಗೂ ಇರಬೇಕು.' ಎಂದು ಹೇಳಲು ಪ್ರಮ್ಲೋಚೆಯು ಶಾಪವನ್ನು ಕೊಟ್ಟಾನೆಂಬ ಭಯದಿಂದ ಸ್ವಲ್ಪಕಡಿಮೆ ಇನ್ನೂರು ವರ್ಷಗಳ ಕಾಲ ಆ ಕಂಡುವಿನೊಡನೆಯೇ ಇದ್ದಳು

೭೭. ದೇವಲೋಕಕ್ಕೆ ಹೋಗಬೇಕೆಂದು ಕಂಡುವನ್ನು ಕೇಳಿದಾಗಲೆಲ್ಲಾ ಕಂಡುವು ಇಲ್ಲಿಯೇ ಇರು ಎಂದು ಹೇಳುತ್ತಿದ್ದನು.

ತಸ್ಯ ಶಾಪಭಯಾದ್ಭೀರುರ್ದಾಕ್ಷಿಣ್ಯೇನ ಚ ದಕ್ಷಿಣಾ ।
ಪ್ರೋಕ್ತಾ ಪ್ರಣಯಭಂಗಾರ್ತಿವೇದಿನೀ ನ ಜಹೌ ಮುನಿಂ ॥ ೭೮ ॥

ತಯಾ ಚ ರಮತಸ್ತಸ್ಯ ಪರಮರ್ಷೇರಹರ್ನಿಶಂ ।
ನವಂ ನವಮಭೂತ್ಪ್ರೇಮ ಮನ್ಮಥಾಸಕ್ತಚೇತಸಃ ॥ ೭೯ ॥

ಏಕದಾ ತು ತ್ವರಾಯುಕ್ತೋ ನಿಶ್ಚಕ್ರಾಮೋಟಜಾನ್ಮುನಿಃ ।
ನಿಷ್ಕ್ರಾಮಂತಂ ಚ ಕುತ್ರೇತಿ ಗಮ್ಯತೇ ಪ್ರಾಹ ಸಾ ಶುಭಾ ॥ ೮೦ ॥

ಇತ್ಯುಕ್ತಃ ಸ ತಯಾ ಪ್ರಾಹ ಪರಿವೃತ್ತಮಹಃ ಶುಭೇ ।
ಸಂಧ್ಯೋಪಾಸ್ತಿಂ ಕರಿಷ್ಯಾಮಿ ಕ್ರಿಯಾಲೋಪೋಽನ್ಯಥಾ ಭವೇತ್ ॥ ೮೧ ॥

ತತಃ ಪ್ರಹಸ್ಯ ಮುದಿತಾ ಸಾ ತಂ ಪ್ರಾಹ ಮಹಾಮುನಿಂ ।
ಕಿಮದ್ಯ ಸರ್ವಧರ್ಮಜ್ಞ ಪರಿವೃತ್ತಮಹಸ್ತವ ।
ಗತಮೇತನ್ನ ಕುರುತೇ ವಿಸ್ಮಯಂ ಕಸ್ಯ ಕಥ್ಯತೇ ॥ ೮೨ ॥

---

೭೮. ಆ ಋಷಿಯ ಶಾಪಭಯದಿಂದಲೂ, ದಾಕ್ಷಿಣ್ಯದಿಂದಲೂ, ಇದು ವರೆವಿಗೂ ನಡೆದು ಬಂದ ಪ್ರಣಯವು ನಾಶವಾದೀತೆಂಬ ದುಃಖದಿಂದಲೂ ಪ್ರಮ್ಲೋಚೆಯು ಆ ಋಷಿಯನ್ನು ಬಿಟ್ಟು ಹೋಗಲಿಲ್ಲ.

೭೯. ಈರೀತಿ ಅವಳೊಡನೆ ವಿಹರಿಸುತ್ತಿರುವ ಆ ಕಂಡುವಿಗೆ ಅನೇಕ ವರ್ಷಗಳು ಕಳೆದರೂ ಇನ್ನೂ ಪ್ರೇಮವು ಹೊಸದಾಗಿರುವಂತೆ ಕಂಡಿತು. ಮನ್ಮಥಾಸಕ್ತಮನಸ್ಸುಳ್ಳವರಿಗೆ ಆರೀತಿಯಾಗಿಯೇ ಕಾಣುವುದು.

೮೦. ಹೀಗೆಯೇ ಇರುತ್ತಿರಲು ಒಂದು ದಿನ ಕಂಡುವು ತನ್ನ ಆಶ್ರಮ ದಿಂದ ಜಾಗ್ರತೆಯಾಗಿ ಹೊರಗೆ ಹೋದನು. ಅದನ್ನು ಕಂಡು ಪ್ರಮ್ಲೋಚೆಯು 'ಇದೇನು, ಇಷ್ಟು ಅವಸರವಾಗಿ ಎಲ್ಲಿಗೆ ಹೊರಟಿರಿ' ಎಂದು ಕೇಳಿದಳು.

೮೧. ಅದಕ್ಕೆ ಕಂಡುವು ಎಲೌ ಮಂಗಳೇ, ಹಗಲು ಕಳೆಯುತ್ತಾ ಬಂದಿರುವುದು. ಸಾಯಂ ಸಂಧ್ಯಾವಂದೆಯವನ್ನು ಮಾಡುವೆನು. ಇಲ್ಲದಿದ್ದರೆ ಕರ್ಮ ಲೋಪವು ಬರುವುದು ಎಂದು ಹೇಳಿದನು.

೮೨. ಅವನ ಮಾತನ್ನು ಕೇಳಿ ಪ್ರಮ್ಲೋಚೆಯು ನಗುತ್ತಾ 'ಎಲೈ ಮಹಾಮುನಿ, ಇದೇನು ನಿನಗೆ ಮಾತ್ರ ಹಗಲು ಕಳೆಯುತ್ತಿರುವುದೇನು? ಸರ್ವ

॥ ಮುನಿರುವಾಚ ॥

ಪ್ರಾತಸ್ತ್ವಮಾಗತಾ ಭದ್ರೇ ನದೀತೀರಮಿದಂ ಶುಭಂ ।
ಮಯಾ ದೃಷ್ಟಾಸಿ ಸುಶ್ರೋಣಿ ಪ್ರವಿಷ್ಟಾ ಚ ಮಮಾಶ್ರಮಂ ॥ ೮೩ ॥

ಇಯಂ ಚ ವರ್ತತೇ ಸಂಧ್ಯಾ ಪರಿಣಾಮಮಹೋ ಗತಂ ।
ಅವಹಾಸಃ ಕಿಮರ್ಥೋಽಯಂ ಸದ್ಭಾವಃ ಕಥ್ಯತಾಂ ಮಮ ॥ ೮೪ ॥

॥ ಪ್ರಮ್ಲೋಚೋವಾಚ ॥

ಪ್ರತ್ಯೂಷಸ್ಯಾಗತಾ ಬ್ರಹ್ಮನ್ಸತ್ಯಮೇತನ್ನ ಮೇ ಮೃಷಾ ।
ಕಿಂ ತ್ವದ್ಯ ತಸ್ಯ ಕಾಲಸ್ಯ ಗತಾನ್ಯಬ್ದಶತಾನಿ ತೇ ॥ ೮೫ ॥

ತತಃ ಸಸಾಧ್ವಸೋ ವಿಪ್ರಸ್ತಾಂ ಪಪ್ರಚ್ಛಾಯತೇಕ್ಷಣಾಂ ।
ಕಥ್ಯತಾಂ ಭೀರು ಕಃ ಕಾಲಸ್ತ್ವಯಾ ಮೇ ರಮತಃ ಸದಾ ॥ ೮೬ ॥

---

ಧರ್ಮಜ್ಞನಾದ್ದ್ದ ನೀನು ಹಿಂದೆ ಕಳೆದುಹೋದುದನ್ನು ಮಾತ್ರ ಜ್ಞಾಪಿಸಿಕೊಳ್ಳು ವುದಿಲ್ಲ. ಈಗೀರೀತಿ ಆಶ್ಚರ್ಯಕರವಾಗಿ ಮಾತನಾಡುತ್ತಿರುವೆ ಎಂದಳು.

೮೩–೮೪. ಕಂಡುವು ಅದನ್ನು ಕೇಳಿ :—ಎಲೌ ಮಂಗಳೇ, ಇದೇನೀರೀತಿ ಮಾತನಾಡುತ್ತಿರುವೆ ? ಇಂದು ಬೆಳಗ್ಗೆ ಈ ನದೀತೀರದಲ್ಲಿ ನಿನ್ನನ್ನು ನೋಡಿದೆನು. ಆಕ್ಷಣ ಆಶ್ರಮಕ್ಕೆ ಕರೆದುಕೊಂಡು ಬಂದೆನು. ಈಗ ಹಗಲು ತಿರುಗಿತು. ಸಂಧ್ಯಾಕಾಲವು ಪ್ರಾಪ್ತವಾಗಿದೆ. ಇದರಲ್ಲಿ ಹಾಸ್ಯ ವೇನಿದೆ ? ಇರುವ ವಿಷಯವೇ ಇಷ್ಟು. ಹೆಚ್ಚಿಗೆ ಏನಾದರೂ ಇದ್ದರೆ ಹೇಳು ಎಂದನು.

೮೫. ಅದಕ್ಕೆ ಪ್ರಮ್ಲೋಚೆಯು ಎಲೈ ಬ್ರಾಹ್ಮಣ, ನಾನೇನೋ ಪ್ರಾತಃ ಕಾಲದಲ್ಲೇ ಬಂದುದು. ಇದು ಸತ್ಯವಾದುದು. ಸುಳ್ಳಲ್ಲ. ಆದರೆ ನೂರಾರು ವರ್ಷಗಳು ಮಾತ್ರ ಕಳೆದಿವೆ, ಅಷ್ಟೆ. ಎಂದಳು.

೮೬. ಅವಳಾಡಿದುದನ್ನು ಕೇಳಿ ಅವಳನ್ನು ಕುರಿತು ಕಂಡುವು ಎಲೌ ವಿಶಾಲಾಕ್ಷಿ, ಹಾಗಾದರೆ ನಿನ್ನೊಡನೆ ನಾನು ಎಷ್ಟುಕಾಲದವರೆಗೂ ರಮಿಸಿರು ವೆನು ? ಅದನ್ನು ಹೇಳು ಎನ್ನಲು

॥ ಪ್ರಮ್ಲೋಚೋವಾಚ ॥

ಸಪ್ತೋತ್ತರಾಣ್ಯತೀತಾನಿ ನವವರ್ಷಶತಾನಿ ಚ ।
ಮಾಸಾಶ್ಚ ಷಟ್ತಥೈವಾನ್ಯತ್ಸಮತೀತಂ ದಿನತ್ರಯಂ ॥ ೮೭ ॥

॥ ಋಷಿರುವಾಚ ॥

ಸತ್ಯಂ ಭೀರು ವದಸ್ಯೇತತ್ಪರಿಹಾಸೋಽಥವಾ ಶುಭೇ ।
ದಿನಮೇಕಮಹಂ ಮನ್ಯೇ ತ್ವಯಾ ಸಾರ್ಧಮಿಹೋಷಿತಂ ॥ ೮೮ ॥

॥ ಪ್ರಮ್ಲೋಚೋವಾಚ ॥

ವದಿಷ್ಯಾಮ್ಯನೃತಂ ಬ್ರಹ್ಮನ್ಕಥಮತ್ರ ತವಾಂತಿಕೇ ।
ವಿಶೇಷಾದದ್ಯ ಭವತಾ ಪೃಷ್ಟಾ ಮಾರ್ಗಾನುಗಾಮಿನಾ ॥ ೮೯ ॥

॥ ವ್ಯಾಸ ಉವಾಚ ॥

ನಿಶಮ್ಯ ತದ್ವಚಸ್ತಸ್ಯಾಃ ಸ ಮುನಿರ್ದ್ವಿಜಸತ್ತಮಾಃ ।
ಧಿಗ್ಧಿಙ್ಮಾಮಿತ್ಯನಾಚಾರಂ ವಿನಿಂದ್ಯಾತ್ಮಾನಮಾತ್ಮನಾ ॥ ೯೦ ॥

---

೮೭. ಪ್ರಮ್ಲೋಚೆಯು ಹೇಳಿದಳು :—ಏಳುನೂರು ವರ್ಷಗಳಿಗಿಂತ ಜಾಸ್ತಿಯಾಯಿತು. ಅಷ್ಟೇಕೆ? ಒಂಭತ್ತುನೂರು ವರ್ಷಗಳು ಹೀಗೆಯೇ ಕಳೆದವು. ಅದರ ಜೊತೆಗೆ ಆರು ತಿಂಗಳುಗಳೂ, ಮೂರು ದಿನಗಳು ಸಹ ಕಳೆದಿವೆ. ಎಂದಳು.

೮೮. ಬಳಿಕ ಆ ಋಷಿಯು ಎಲೌ ಭೀರು, ಈಗ ನೀನು ಹೇಳಿದುದು ನಿಜವೋ ಸುಳ್ಳೋ ಅಥವಾ ಪರಿಹಾಸ್ಯವೋ. ನಾನೇನೋ ನಿನ್ನೊಡನೆ ರಮಿಸಿ ಒಂದೇ ಒಂದು ದಿನವಾಗಿರುವುದೆಂದು ತಿಳಿದುಕೊಂಡಿರುವೆನು ಎಂದನು.

೮೯. ಪ್ರಮ್ಲೋಚೆಯು ಮತ್ತಿಂತೆಂದಳು :— ಓ ಬ್ರಹ್ಮನ್, ನಿನ್ನ ಸಮೀಪದಲ್ಲಿ ನಾನು ಸುಳ್ಳನ್ನು ಹೇಳಲೇ ? ಅದರಲ್ಲಿಯೂ ಮಾರ್ಗಗಾಮಿಯಾದ ನೀನು ನನ್ನನ್ನು ಕೇಳುತ್ತಿರಲು ನಾನು ಸುಳ್ಳು ಹೇಳುವೆನೇ ? ಎಂದಳು.

೯೦. ಪ್ರಮ್ಲೋಚೆಯ ಮಾತನ್ನು ಕೇಳಿ ಆ ಮುನಿವರನು ' ಅಯ್ಯೋ ಅಯ್ಯೋ, ಅನಾಚಾರವಾಯಿತು. ಎಂಬುದಾಗಿ ತನ್ನನ್ನು ತಾನೇ ನಿಂದಿಸಿ ಕೊಂಡನು.

॥ ಮುನಿರುವಾಚ ॥

ತಪಾಂಸಿ ಮಮ ನಷ್ಟಾನಿ ಹತಂ ಬ್ರಹ್ಮವಿದಾಂ ಧನಂ ।
ಹೃತೋ ವಿವೇಕಃ ಕೇನಾಪಿ ಯೋಷಿನ್ಮೋಹಾಯ ನಿರ್ಮಿತಾ ॥ ೯೧ ॥

ಊರ್ಮಿಷಟ್ಕಾತಿಗಂ ಬ್ರಹ್ಮ ಜ್ಞೇಯಮಾತ್ಮಜಯೇನ ಮೇ ।
ಗತಿರೇಷಾ ಕೃತಾ ಯೇನ ಧಿಕ್ತಂ ಕಾಮಮಹಾಗ್ರಹಂ ॥ ೯೨ ॥

ವ್ರತಾನಿ ಸರ್ವವೇದಾಶ್ಚ ಕಾರಣಾನ್ಯಖಿಲಾನಿ ಚ ।
ನರಕಗ್ರಾಮಮಾರ್ಗೇಣ ಕಾಮೇನಾದ್ಯ ಹತಾನಿ ಮೇ ॥ ೯೩ ॥

ವಿನಿಂದ್ಯೇತ್ಥಂ ಸ ಧರ್ಮಜ್ಞಃ ಸ್ವಯಮಾತ್ಮಾನಮಾತ್ಮನಾ ।
ತಾಮಪ್ಸರಸಮಾಸೀನಾಮಿದಂ ವಚನಮಬ್ರವೀತ್ ॥ ೯೪ ॥

---

೯೧. ಅಯ್ಯೋ, ನಾನು ಮಾಡಿದ ತಪಸ್ಸೆಲ್ಲವೂ ನಷ್ಟವಾಯಿತು. ಬ್ರಹ್ಮಜ್ಞಾನಿಗಳಿಗೆ ತಪಸ್ಸೇ ಧನರೂಪವಾದುದು ಯಾವುದೋ ಅನಾಚಾರದಿಂದ ನಾನು ವಿವೇಕಶೂನ್ಯನಾಗಿರುವೆನು. ಈ ಸ್ತ್ರೀಯು ಕೇವಲ ಮೋಹಕ್ಕೋಸ್ಕರವಾಗಿ ನಿರ್ಮಿತವಾಗಿರುವಳು.

೯೨. ಊರ್ಮಿಷಟ್ಕಗಳಿಗಿಂತಲೂ ಭಿನ್ನವಾಗಿರುವ ಬ್ರಹ್ಮಜ್ಞಾನವನ್ನು ತಿಳಿದುಕೊಳ್ಳಬೇಕಾದರೆ ಆತ್ಮಜಯದಿಂದಲೇ ಹೊರತು ಬೇರೆಯದರಿಂದ ಸಾಧ್ಯವಿಲ್ಲ. ಈರೀತಿ ಬ್ರಹ್ಮಜ್ಞಾನವನ್ನು ಸಂಪಾದಿಸಿದ್ದ ನನಗೆ ಈಗತಿಯಾಯಿತೇ ? ಇದಕ್ಕೆಲ್ಲಾ ಆ ಕಾಮನೇ ಕಾರಣನು. ಮಹಾದುಷ್ಟನಾದ ಅವನನ್ನು ನಾಶಮಾಡಬೇಕು.

೯೩. ಆ ಕಾಮನಿಂದ ವ್ರತಗಳು, ವೇದಗಳು, ಸಮಸ್ತಕಾರಣಗಳೂ ಸಹ ನಷ್ಟವಾದುವು. ಆದರೆ ಈಗದರಿಂದ ನರಕಕ್ಕೆ ಹೋಗುವ ಮಾರ್ಗವು ಮಾತ್ರ ಉಳಿದಿರುವುದು.

೯೪. ಈರೀತಿ ತನ್ನನ್ನು ನಿಂದಿಸಿಕೊಂಡು, ಆ ಧರ್ಮಜ್ಞನಾದ ಕಂಡುವು ಅಲ್ಲಿ ಕುಳಿತಿರುವ ಪ್ರಮ್ಲೋಚೆಯನ್ನು ಕುರಿತು ಎಲೌ ಪಾಪಿಷ್ಠೆ, ನಡೆ.

॥ ಋಷಿರುವಾಚ ॥

ಗಚ್ಛ ಪಾಪೇ ಯಥಾಕಾಮಂ ಯತ್ಕಾರ್ಯಂ ತತ್ತ್ವಯಾ ಕೃತಂ ।
ದೇವರಾಜಸ್ಯ ಯತ್ಕ್ಷೋಭಂ ಕುರ್ವಂತ್ಯಾ ಭಾವಚೇಷ್ಟಿತೈಃ ॥ ೯೪ ॥

ನ ತ್ವಾಂ ಕರೋಮ್ಯಹಂ ಭಸ್ಮ ಕ್ರೋಧತೀವ್ರೇಣ ವಹ್ನಿನಾ ।
ಸತಾಂ ಸಾಪ್ತಪದಂ ಮೈತ್ರ್ಯಮುಷಿತೋಽಹಂ ತ್ವಯಾ ಸಹ ॥ ೯೫ ॥

ಅಥವಾ ತವ ದೋಷಃ ಕಃ ಕಿಂವಾ ಕುರ್ಯಾಮಹಂ ತವ ।
ಮಮೈವ ದೋಷೋ ನಿತರಾಂ ಯೇನಾಹಮಜಿತೇಂದ್ರಿಯಃ ॥ ೯೬ ॥

ಯಥಾ ಶಕ್ರಪ್ರಿಯಾರ್ಥಿನ್ಯಾ ಕೃತೋ ಮತ್ತಪಸೋ ವ್ಯಯಃ ।
ತ್ವಯಾ ದೃಷ್ಟಿಮಹಾಮೋಹಮನುನಾಹಂ ಜುಗುಪ್ಸಿತಃ ॥ ೯೭ ॥

---

ನಿನಗಿಷ್ಟಬಂದ ಕಡೆಗೆ ತೊಲಗು. ಯಾವ ಕೆಲಸವನ್ನು ಮಾಡಬೇಕೆಂದು ಬಂದೆಯೋ ಆ ಕೆಲಸವು ನೆರವೇರಿತು. ಹಾವಭಾವವಿಲಾಸಗಳಿಂದ ನನ್ನ ಮನಸ್ಸನ್ನು ಕಲಕಿ ದೇವೇಂದ್ರನ ಆಜ್ಞೆಯನ್ನು ನೆರವೇರಿಸಿದೆ.

೯೫-೯೬. ಕೋಪಾಗ್ನಿಯಿಂದ ನಿನ್ನನ್ನು ಭಸ್ಮಮಾಡಿಬಿಡಬಹುದಾಗಿತ್ತು. ಆದರೆ ಬೇಡ. ಆರೀತಿ ಮಾಡಲಾರೆನು. ಏಕೆಂದರೆ ಏಳು ಹೆಜ್ಜೆಯಷ್ಟು ದೂರ ಜತೆಯಲ್ಲಿ ನಡೆದುಹೋಗುವುದರಿಂದಲೇ ಪರಸ್ಪರ ಸ್ನೇಹವಾಗುವುದೆಂದು ಸಜ್ಜನರು ಹೇಳುವರು. ನಾನು ನಿನ್ನೊಡನೆ ಅನೇಕ ದಿವಸಗಳು ವಾಸವಾಗಿದ್ದೆನು. ಅಥವಾ ಇದರಲ್ಲಿ ನಿನ್ನ ದೋಷತಾನೇ ಏನಿದೆ? ದೋಷವಿದ್ದಿದ್ದರೆ ನಾನಾರೀತಿ ಮಾಡಬಹುದಾಗಿತ್ತು. ಆದರೆ ನನ್ನದೇ ತಪ್ಪು. ನಾನು ಇಂದ್ರಿಯಗಳನ್ನು ಸರಿಯಾಗಿ ಸ್ವಾಧೀನಪಡಿಸಿಕೊಂಡಿದ್ದರೆ ಈ ರೀತಿಯಾಗುತ್ತಲೇ ಇರಲಿಲ್ಲ.

೯೭. ಇಂದ್ರನಿಗೆ ಪ್ರಿಯವನ್ನುಂಟುಮಾಡಲು ನೀನು ನನ್ನ ತಪಸ್ಸನ್ನು ಹಾಳುಮಾಡಿದೆ. ನಾನೂ ನಿನ್ನ ಮಹಾಮೋಹಕವಾದ ದೃಷ್ಟಿಗೆ ಬಿದ್ದು ಈರೀತಿ ಜುಗುಪ್ಸಿತನಾದೆನು ಎಂದು ಚಿಂತಿಸಿದನು.

॥ ವ್ಯಾಸ ಉವಾಚ ॥

ಯಾವದಿತ್ಥಂ ಸ ವಿಪ್ರರ್ಷಿಸ್ತಾಂ ಬ್ರವೀತಿ ಸುಮಧ್ಯಮಾಂ ।
ತಾವತ್ಸ್ವಲತ್ಸ್ವೇದಜಲಾ ಸಾ ಬಭೂವಾತಿವೇಪಥುಃ ॥ ೯೮ ॥

ಪ್ರವೇಪಮಾನಾಂ ಸ ಚ ತಾಂ ಸ್ವಿನ್ನಗಾತ್ರಲತಾಂ ಸತೀಂ ।
ಗಚ್ಛ ಗಚ್ಛೇತಿ ಸಕ್ರೋಧಮುವಾಚ ಮುನಿಸತ್ತಮಃ ॥ ೯೯ ॥

ಸಾ ತು ನಿರ್ಭರ್ತ್ಸಿತಾ ತೇನ ವಿನಿಷ್ಕ್ರಮ್ಯ ತದಾಶ್ರಮಾತ್ ।
ಆಕಾಶಗಾಮಿನೀ ಸ್ವೇದಂ ಮಮಾರ್ಜ ತರುಪಲ್ಲವೈಃ ॥ ೧೦೦ ॥

ವೃಕ್ಷಾದ್ವೃಕ್ಷಂ ಯಯೌ ಬಾಲಾ ಉದಗ್ರಾರುಣಪಲ್ಲವೈಃ ।
ನಿರ್ಮಮಾರ್ಜ ಚ ಗಾತ್ರಾಣಿ ಗಲತ್ಸ್ವೇದಜಲಾನಿ ವೈ ॥ ೧೦೧ ॥

ಋಷಿಣಾ ಯಸ್ತದಾ ಗರ್ಭಸ್ತಸ್ಯಾ ದೇಹೇ ಸಮಾಹಿತಃ ।
ನಿರ್ಜಗಾಮ ಸರೋಮಾಂಚಸ್ವೇದರೂಪೀ ತದಂಗತಃ ॥ ೧೦೨ ॥

---

೯೮. ಈರೀತಿಯಾಗಿ ಕಂಡುವಾಡಿದುದನ್ನು ಕೇಳಿ ಆ ಅಪ್ಸರೆಯು ಹೆದರಿದಳು. ಬೆವರು ಹರಿಯಲು ಪ್ರಾರಂಭಿಸಿತು. ನಡುಗುತ್ತಾ ಸುಮ್ಮನೆ ನಿಂತುಕೊಂಡಳು.

೯೯. ಈರೀತಿಯಾಗಿ ನಡುಗುತ್ತಾ ನಿಂತಿರುವ ಪ್ರಮ್ಲೋಚೆಯನ್ನು ನೋಡಿ ಅತಿಕೋಪದಿಂದ ಕಂಡುವು ' ನಡೆ ನಡೆ ' ಎಂಬುದಾಗಿ ಹೇಳಿದನು.

೧೦೦. ಈರೀತಿ ಕಂಡುವು ನಿಂದಿಸಲು ಪ್ರಮ್ಲೋಚೆಯು ಅವನಾಶ್ರಮ ದಿಂದ ಹೊರಹೊರಟು ಆಕಾಶಮಾರ್ಗದಲ್ಲಿ ಹೋಗುತ್ತಾ ಮರದ ಚಿಗುರುಗಳಿಂದ ಬೆವರನ್ನೆಲ್ಲಾ ಹೋಗಲಾಡಿಸಿಕೊಂಡಳು.

೧೦೧. ದಾರಿಯಲ್ಲಿ ಮರದಿಂದ ಮರಕ್ಕೆ ನೆಗೆಯುತ್ತಾ ಅಲ್ಲಿರುವ ತಂಪಾಗಿಯೂ ಮೃದುವಾಗಿಯೂ ಇರುವ ಚಿಗುರುಗಳಿಂದ ತನ್ನ ಶರೀರವನ್ನೂ ಮತ್ತು ಬೆವರುಗಳನ್ನೂ ಒರೆಸಿಕೊಂಡಳು.

೧೦೨. ಕಂಡುವಿನೊಡನೆ ವಾಸವಾಗಿದ್ದಾಗ ಪ್ರಮ್ಲೋಚೆಯು ಗರ್ಭ ವನ್ನು ಧರಿಸಿದ್ದಳು. ಈಗ ಆ ಗರ್ಭವು ಬೆವರಿನ ಮೂಲಕವಾಗಿ ಈಚೆಗೆ ಬಂದಿತು.

**ತಂ ವೃಕ್ಷಾ ಜಗೃಹುರ್ಗರ್ಭಮೇಕಂ ಚಕ್ರೇ ಚ ಮಾರುತಃ ।**
**ಸೋಮೇನಾಪ್ಯಾಯಿತೋ ಗೋಭಿಃ ಸ ತದಾ ವವೃಧೇ ಶನೈಃ ॥ ೧೦೩ ॥**

**ಮಾರಿಷಾ ನಾಮ ಕನ್ಯಾಭೂದ್ವೃಕ್ಷಾಣಾಂ ಚಾರುಲೋಚನಾ ।**
**ಪ್ರಾಚೇತಸಾನಾಂ ಸಾ ಭಾರ್ಯಾ ದಕ್ಷಸ್ಯ ಜನನೀ ದ್ವಿಜಾಃ ॥ ೧೦೪ ॥**

**ಸ ಚಾಪಿ ಭಗವಾನ್ಕಂಡುಃ ಕ್ಷೀಣೇ ತಪಸಿ ಸತ್ತಮಃ ।**
**ಪುರುಷೋತ್ತಮಾಖ್ಯಂ ಭೋ ವಿಪ್ರಾ ವಿಷ್ಣೋರಾಯತನಂ ಯಯೌ ॥**

**ದದರ್ಶ ಪರಮಂ ಕ್ಷೇತ್ರಂ ಮುಕ್ತಿದಂ ಭುವಿ ದುರ್ಲಭಂ ।**
**ದಕ್ಷಿಣಸ್ಯೋದಧೇಸ್ತೀರೇ ಸರ್ವಕಾಮಫಲಪ್ರದಂ ॥ ೧೦೬ ॥**

**ಸುರಮ್ಯಂ ವಾಲುಕಾಕೀರ್ಣಂ ಕೇತಕೀವನಶೋಭಿತಂ ।**
**ನಾನಾದ್ರುಮಲತಾಕೀರ್ಣಂ ನಾನಾಪಕ್ಷಿರುತಂ ಶಿವಂ ॥ ೧೦೭ ॥**

---

೧೦೩. ಆರೀತಿಯಾಗಿ ಬೆವರಿನ ಮೂಲಕ ಬಂದ ಗರ್ಭವನ್ನು ವೃಕ್ಷಗಳು ಸ್ವೀಕರಿಸಿದವು. ವಾಯುವೂ ಸ್ವೀಕರಿಸಿದನು. ಚಂದ್ರನೂ ತನ್ನ ಕಿರಣಗಳಿಂದ ಸ್ವೀಕರಿಸಿದನು. ಹೀಗೆ ಗರ್ಭವು ನಿಧಾನವಾಗಿ ಬೆಳೆಯಲು ಪ್ರಾರಂಭಿಸಿತು.

೧೦೪. ಎಲೈ ಋಷಿಗಳಿರಾ, ಆ ವೃಕ್ಷಗಳು ಸ್ವೀಕರಿಸಿದ ಗರ್ಭದಿಂದ ಮಾರಿಷಾ ಎಂಬ ಕನ್ಯೆಯು ಹುಟ್ಟಿದಳು. ಅವಳೇ ಪ್ರಾಚೇತಸರ ಹೆಂಡತಿಯು. ಮತ್ತು ದಕ್ಷಪ್ರಜಾಪತಿಯ ತಾಯಿಯು.

೧೦೫. ತನ್ನ ತಪಸ್ಸೆಲ್ಲವೂ ನಾಶವಾಗಲು ಕಂಡುವು ಪುರುಷೋತ್ತಮ ಕ್ಷೇತ್ರಕ್ಕೆ ಹೊರಟುಹೋದನು. ಅಲ್ಲಿ ವಿಷ್ಣುವು ವಾಸವಾಗಿರುವನು.

೧೦೬. ಆ ಪರಮಪವಿತ್ರವಾದ ಪುರುಷೋತ್ತಮಕ್ಷೇತ್ರವು ದಕ್ಷಿಣ ಸಮುದ್ರದ ತೀರದಲ್ಲಿರುವುದು. ಇದರ ಸೇವನೆಯಿಂದ ಸರ್ವೇಷ್ಟಾರ್ಥಗಳೂ ಸಿದ್ಧಿಸುವುವಲ್ಲದೆ ದುರ್ಲಭವಾದ ಮುಕ್ತಿಯು ದೊರೆಯುವುದು.

೧೦೭-೧೦೮. ಆ ಕ್ಷೇತ್ರವು ಬಹಳ ರಮ್ಯವಾಗಿರುವುದು. ಎಲ್ಲೆಲ್ಲಿಯೂ ಮರಳುಗಳಿಂದ ಕೂಡಿರುವುದು. ಅಲ್ಲಲ್ಲೇ ತಾಳೇ ಹೂವಿನ ವನಗಳಿರುವುವು.

ಸರ್ವತ್ರ ಸುಖಸಂಚಾರಂ ಸರ್ವರ್ತುಕುಸುಮಾನ್ವಿತಂ ।
ಸರ್ವಸೌಖ್ಯಪ್ರದಂ ನೃಣಾಂ ಧನ್ಯಂ ಸರ್ವಗುಣಾಕರಂ ॥ ೧೦೮ ॥

ಭೃಗ್ವಾದ್ಯೈಃ ಸೇವಿತಂ ಪೂರ್ವಂ ಮುನಿಸಿದ್ಧವರೈಸ್ತಥಾ ।
ಗಂಧರ್ವೈಃ ಕಿಂನರೈರ್ಯಕ್ಷೈಸ್ತಥಾನ್ಯೈರ್ಮೋಕ್ಷಕಾಂಕ್ಷಿಭಿಃ ॥ ೧೦೯ ॥

ದದರ್ಶ ಚ ಹರಿಂ ತತ್ರ ದೇವೈಃ ಸರ್ವೈರಲಂಕೃತಂ ।
ಬ್ರಾಹ್ಮಣಾದ್ಯೈಸ್ತಥಾ ವರ್ಣೈರಾಶ್ರಮಸ್ಥೈರ್ನಿಷೇವಿತಂ ॥ ೧೧೦ ॥

ದೃಷ್ಟ್ವೈವ ಸ ತದಾ ಕ್ಷೇತ್ರಂ ದೇವಂ ಚ ಪುರುಷೋತ್ತಮಂ ।
ಕೃತಕೃತ್ಯಮಿವಾತ್ಮಾನಂ ಮೇನೇ ಸ ಮುನಿಸತ್ತಮಃ ॥ ೧೧೧ ॥

---

ಅನೇಕವಿಧವಾದ ಮರಗಳೂ ಗಿಡಬಳ್ಳಿಗಳೂ ಇರುವುವು. ನಾನಾವಿಧವಾದ ಪಕ್ಷಿಗಳು ಮಧುರವಾಗಿ ಕೂಗುತ್ತಿರುವುವು. ಎಲ್ಲಿ ಬೇಕಾದರೂ ನಿರ್ಭಯವಾಗಿ ಸಂಚರಿಸಬಹುದು. ಎಲ್ಲಾ ಋತುಗಳಲ್ಲಿಯೂ ಹೂವಿನಿಂದ ಸಮೃದ್ಧಿಯಾಗಿರುವುದು. ಅಲ್ಲಿಗೆ ಹೋದ ಜನಗಳಿಗೆ ಸರ್ವಸೌಖ್ಯವೂ ಒದಗುವುದು. ಎಲ್ಲಾ ಗುಣಗಳಿಂದಲೂ ಕೂಡಿರುವ ಈ ಕ್ಷೇತ್ರವೇ ಸರ್ವಶ್ರೇಷ್ಠವಾದುದು.

೧೦೯. ಹಿಂದೆ ಭೃಗು ಮೊದಲಾದ ಋಷಿಶ್ರೇಷ್ಠರು ಈ ಕ್ಷೇತ್ರದಲ್ಲಿ ವಾಸವಾಗಿದ್ದರು. ಈಗಲೂ ಅನೇಕ ಸಿದ್ಧರೂ, ಮುನಿಗಳೂ, ಗಂಧರ್ವರೂ, ಕಿನ್ನರ, ಯಕ್ಷ, ಮುಂತಾದವರೂ ಮತ್ತು ಮೋಕ್ಷಾಪೇಕ್ಷೆಯುಳ್ಳವರೂ ಸಹ ಇಲ್ಲಿಗೆ ಬಂದು ಸೇವಿಸುವರು.

೧೧೦. ಆ ಕ್ಷೇತ್ರದಲ್ಲಿರುವ ವಿಷ್ಣುವನ್ನು ದೇವತೆಗಳೆಲ್ಲರೂ ಸೇವಿಸುತ್ತಿದ್ದರು. ಆಶ್ರಮಗಳಲ್ಲಿರುವ ಅನೇಕ ಬ್ರಾಹ್ಮಣರೂ ಇತರರೂ ಸಹ ಪೂಜಿಸುತ್ತಿದ್ದರು. ಇಂತಹ

೧೧೧. ಕ್ಷೇತ್ರವನ್ನೂ, ದೇವದೇವನಾದ ಪುರುಷೋತ್ತಮನನ್ನೂ ನೋಡಿ ಋಷಿಶ್ರೇಷ್ಠನಾದ ಕಂಡುವು ತನ್ನನ್ನು ಕೃತಾರ್ಥನೆಂದು ತಿಳಿದುಕೊಂಡನು.

ತತ್ರೈಕಾಗ್ರಮನಾ ಭೂತ್ವಾ ಚಕಾರಾರಾಧನಂ ಹರೇಃ ।
ಬ್ರಹ್ಮಪಾರಮಯಂ ಕುರ್ವನ್ ಜಪಮೇಕಾಗ್ರಮಾನಸಃ ।
ಊರ್ಧ್ವಬಾಹುರ್ಮಹಾಯೋಗೀ ಸ್ಥಿತ್ವಾಸೌ ಮುನಿಸತ್ತಮಃ ॥ ೧೧೨ ॥

॥ ಮುನಯ ಊಚುಃ ॥

ಬ್ರಹ್ಮಪಾರಂ ಮುನೇ ಶ್ರೋತುಮಿಚ್ಛಾಮಃ ಪರಮಂ ಶುಭಂ ।
ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ ॥ ೧೧೩ ॥

॥ ವ್ಯಾಸ ಉವಾಚ ॥

ಪಾರಂ ಪರಂ ವಿಷ್ಣುರಪಾರಪಾರಃ
ಪರಃ ಪರೇಭ್ಯಃ ಪರಮಾತ್ಮರೂಪಃ ।
ಸ ಬ್ರಹ್ಮಪಾರಃ ಪರಪಾರಭೂತಃ
ಪರಃ ಪರಾಣಾಮಪಿ ಪಾರಪಾರಃ ॥ ೧೧೪ ॥

---

೧೧೨. ಏಕಾಗ್ರಮನಸ್ಸಿನಿಂದ ಹರಿಯನ್ನು ಆರಾಧಿಸಿದನು. ಬ್ರಹ್ಮಪಾರಮಯವಾದ ಜಪವನ್ನು ಮಾಡಲು ಪ್ರಾರಂಭಿಸಿದನು. ಕೈಗಳನ್ನು ಮೇಲಕ್ಕೆತ್ತಿಕೊಂಡು ನಿಂತು ಏಕಾಗ್ರಚಿತ್ತನಾಗಿ ಜಪವನ್ನು ಮಾಡಿದನು.

೧೧೩. ಋಷಿಗಳು ಕೇಳಿದರು.–ಎಲೈ ವ್ಯಾಸಮಹಾಮುನಿಯೇ, ಆ ಬ್ರಹ್ಮಪಾರವೆಂದರೇನು? ಅದರ ವಿಷಯವನ್ನು ಕೇಳಲಿಚ್ಛೆಯುಳ್ಳವರಾಗಿರುವೆವು. ಕಂಡುವು ಜಪಮಾಡುತ್ತಿದ್ದುದು ಬ್ರಹ್ಮಪಾರವನ್ನಲ್ಲವೇ? ಅದರಿಂದ ಕೇಶವನನ್ನು ಅವನು ಹೇಗೆ ಆರಾಧಿಸಿದನು, ಎಂದರು.

೧೧೪. ವಿಷ್ಣುರೂಪಿಯಾದ ಪರಮಾತ್ಮನು ಸಂಸಾರಸಮುದ್ರಕ್ಕೆ ಸೇತುವೆಯಂತಿರುವನು. ಅವನ ಮಹಿಮೆಗೆ ಕೊನೆಯೆಂಬುದಿಲ್ಲ. ಸಮಸ್ತ ವಸ್ತುಗಳಿಗಿಂತಲೂ ಭಿನ್ನನಾದವನು, ಸರ್ವೋತ್ತಮನವನು, ಸಕಲಪ್ರಾಣಿಗಳಲ್ಲಿಯೂ ಆತ್ಮರೂಪದಿಂದ ವಾಸಿಸುವನು, ಅವ್ಯಕ್ತಸ್ವರೂಪನಾದ ಪರಬ್ರಹ್ಮನವನು, ಪ್ರಕೃತಿಸಂಬಂಧವಾದ ವಸ್ತುಗಳಿಗಿಂತ ಭಿನ್ನನಾಗಿ ಸರ್ವವ್ಯಾಪಿಯಾಗಿಯೂ, ಸರ್ವಶ್ರೇಷ್ಠನಾಗಿಯೂ ಇರುವನು.

ಸ ಕಾರಣಂ ಕಾರಣಸಂಶ್ರಿತೋಽಪಿ
ತಸ್ಯಾಪಿ ಹೇತುಃ ಪರಹೇತುಹೇತುಃ ।
ಕಾರ್ಯೋಽಪಿ ಚೈಷ ಸಹ ಕರ್ಮಕರ್ತೃ....
...............ರೂಪೈರನೇಕೈರವತೀಹ ಸರ್ವಂ ॥ ೧೧೫ ॥

ಬ್ರಹ್ಮ ಪ್ರಭುರ್ಬ್ರಹ್ಮ ಸ ಸರ್ವಭೂತೋ
ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽಸೌ ।
ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣು-
ರಪಕ್ಷಯಾದ್ಯೈರಖಿಲೈರಸಂಗಃ ॥ ೧೧೬ ॥

ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಸೌ ಪುರುಷೋತ್ತಮಃ ।
ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥ ೧೧೭ ॥

॥ ವ್ಯಾಸ ಉವಾಚ ॥
ಶ್ರುತ್ವಾ ತಸ್ಯ ಮುನೇರ್ಜಾಪ್ಯಂ ಬ್ರಹ್ಮಪಾರಂ ದ್ವಿಜೋತ್ತಮಾಃ ।
ಭಕ್ತಿಂ ಚ ಪರಮಾಂ ಜ್ಞಾತ್ವಾ ಸುದೃಢಾಂ ಪುರುಷೋತ್ತಮಃ ॥ ೧೧೮ ॥

---

೧೧೫. ಅವನಿಗೆ ಮತ್ತಾರೂ ಕಾರಣರಲ್ಲದಿದ್ದರೂ ಅವನು ಸರ್ವಜಗತ್ತಿಗೂ ಕಾರಣಕರ್ತನು. ಅವನು ಇನ್ನೊಬ್ಬರಿಂದ ಜನಿಸಿದವನಲ್ಲ, ಅವನಿಂದ ಸಮಸ್ತವೂ ಜನಿಸಿದೆ. ಸಕಲ ಚರಾಚರಪ್ರಪಂಚಕ್ಕೂ ಅವನೇ ಕಾರಣನು. ಕರ್ಮ, ಕರ್ತೃ, ಕಾರಣ ಎಲ್ಲವೂ ಅವನೇ, ಅವನನ್ನು ಬಿಟ್ಟು ಬೇರೆ ವಸ್ತುವಿಲ್ಲ. ಅವನೇ ನಾನಾರೂಪಗಳಿಂದ ಸಮಸ್ತಪ್ರಪಂಚರೂಪವಾಗಿ ತೋರುತ್ತಿರುವನು.

೧೧೬. ಪ್ರಪಂಚಕ್ಕೆಲ್ಲಾ ಬ್ರಹ್ಮನೇ ಪ್ರಭುವು. ಅವನೇ ಸರ್ವಭೂತಾತ್ಮನು. ಪ್ರಜೆಗಳಿಗೆಲ್ಲಾ ಪತಿಯು ಬ್ರಹ್ಮಸ್ವರೂಪನು. ಅವನು ನಾಶರಹಿತನು, ನಿತ್ಯನು, ಉತ್ಪತ್ತಿರಹಿತನು. ಅವನೇ ವಿಷ್ಣುವು. ಸಂಗರಹಿತನೂ ಅವನೇ.

೧೧೭. ಪುರುಷೋತ್ತಮನು ಬ್ರಹ್ಮಸ್ವರೂಪನೂ, ನಾಶರಹಿತನೂ ಉತ್ಪತ್ತಿರಹಿತನೂ ಆಗಿರುವುದು ನಿಜವಾದರೆ ನನ್ನ ರಾಗಾದಿ ದೋಷಗಳನ್ನೆಲ್ಲಾ ನಾಶಮಾಡಲಿ

೧೧೮-೧೧೯. ಕಂಡುವು ಮಾಡುತ್ತಿರುವ ಬ್ರಹ್ಮಪಾರಪದಿಂದಲೂ ಅವನ

ಪ್ರೀತ್ಯಾ ಸ ಪರಯಾ ದೇವಸ್ತದಾಸೌ ಭಕ್ತವತ್ಸಲಃ ।
ಗತ್ವಾ ತಸ್ಯ ಸಮೀಪಂ ತು ಪ್ರೋವಾಚ ಮಧುಸೂದನಃ ॥ ೧೧೯ ॥

ಮೇಘಗಂಭೀರಯಾ ವಾಚಾ ದಿಶಃ ಸಂನಾದಯನ್ನಿವ ।
ಆರುಹ್ಯ ಗರುಡಂ ವಿಪ್ರಾ ವಿನತಾಕುಲನಂದನಂ ॥ ೧೨೦ ॥

॥ ಶ್ರೀಭಗವಾನುವಾಚ ॥

ಮುನೇ ಬ್ರೂಹಿ ಪರಂ ಕಾರ್ಯಂ ಯತ್ತೇ ಮನಸಿ ವರ್ತತೇ ।
ವರದೋಽಹಮನುಪ್ರಾಪ್ತೋ ವರಂ ವರಯ ಸುವ್ರತ ॥ ೧೨೧ ॥

ಶ್ರುತ್ವೈವಂ ವಚನಂ ತಸ್ಯ ದೇವದೇವಸ್ಯ ಚಕ್ರಿಣಃ ।
ಚಕ್ಷುರುನ್ಮೀಲ್ಯ ಸಹಸಾ ದದರ್ಶ ಪುರತೋ ಹರಿಂ ॥ ೧೨೨ ॥

ಅತಸೀಪುಷ್ಪಸಂಕಾಶಂ ಪದ್ಮಪತ್ರಾಯತೇಕ್ಷಣಂ ।
ಶಂಖಚಕ್ರಗದಾಪಾಣಿಂ ಮುಕುಟಾಂಗದಧಾರಿಣಂ ॥ ೧೨೩ ॥

---

ದೃಢವಾದ ಭಕ್ತಿಯಿಂದಲೂ, ಸಂತುಷ್ಟನಾದ ಪುರುಷೋತ್ತಮನು ಅತ್ಯಂತ ಪ್ರೀತಿಯಿಂದ ಕಂಡುವಿನ ಸಮೀಪಕ್ಕೆ ಹೋಗಿ ಅವನನ್ನು ಕುರಿತು ಇಂತೆಂದನು,

೧೨೦. ವಿನತಾಕುಲನಂದನನಾದ ಗರುಡನನ್ನು ಏರಿಕೊಂಡು ಬಂದು ಮೇಘದಂತೆ ಗಂಭೀರವಾದ ಧ್ವನಿಯಿಂದ ದಿಕ್ಕುಗಳನ್ನು ಪ್ರತಿಧ್ವನಿಮಾಡು ತ್ತಿರುವನೋ ಎಂಬಂತೆ ಮಾತನಾಡಿದನು.

೧೨೧. ಶ್ರೀಭಗವಂತನು ಹೇಳಿದನು.—ಎಲೈ ಮುನಿಯೇ, ನಾನು ಪ್ರಸನ್ನನಾಗಿ ನಿನಗೆ ವರವನ್ನೀಯಲು ಬಂದಿರುವೆನು. ನಿನ್ನ ಮನಸ್ಸಿನ ಇಷ್ಟಾರ್ಥವನ್ನು ಕೇಳಿಕೋ ಎಂದನು.

೧೨೨. ವಿಷ್ಣುವಿನ ಮಾತನ್ನು ಕೇಳಿ ಕಂಡುವು ಕಣ್ಣನ್ನು ಬಿಟ್ಟು ನೋಡಲು ಎದುರಿಗೆ ದೇವದೇವನಾದ ಹರಿಯು ನಿಂತಿರುವುದು ಕಂಡಿತು.

೧೨೩-೧೨೫. ಪರಮಾತ್ಮನ ಶರೀರವು ಅಗಸೆಯ ಹೂವಿನಂತೆ ಪ್ರಕಾಶಿಸುತ್ತಿತ್ತು. ಆತನ ಕಣ್ಣುಗಳು ಕಮಲದ ದಳದಂತೆ ವಿಶಾಲವಾಗಿದ್ದವು. ಶಂಖ, ಚಕ್ರ, ಗದೆಗಳನ್ನು ಧರಿಸಿದ್ದನು. ಕಿರೀಟವನ್ನು ತಲೆಯಲ್ಲಿಯೂ ಭುಜ

ಚತುರ್ಬಾಹುಮುದಾರಾಂಗಂ ಪೀತವಸ್ತ್ರಧರಂ ಶುಭಂ ।
ಶ್ರೀವತ್ಸಲಕ್ಷ್ಮಸಂಯುಕ್ತಂ ವನಮಾಲಾವಿಭೂಷಿತಂ ॥ ೧೨೪ ॥

ಸರ್ವಲಕ್ಷಣಸಂಯುಕ್ತಂ ಸರ್ವರತ್ನವಿಭೂಷಿತಂ ।
ದಿವ್ಯಚಂದನಲಿಪ್ತಾಂಗಂ ದಿವ್ಯಮಾಲ್ಯವಿಭೂಷಿತಂ ॥ ೧೨೫ ॥

ತತಃ ಸ ವಿಸ್ಮಯಾವಿಷ್ಟೋ ರೋಮಾಂಚಿತತನೂರುಹಃ ।
ದಂಡವತ್ಪ್ರಣಿಪತ್ಯೋರ್ವ್ಯಾಂ ಪ್ರಣಾಮಮಕರೋತ್ತದಾ ॥ ೧೨೬ ॥

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ।
ಇತ್ಯುಕ್ತ್ವಾ ಮುನಿಶಾರ್ದೂಲಾಸ್ತಂ ಸ್ತೋತುಮುಪಚಕ್ರಮೇ ॥ ೧೨೭ ॥

॥ ಕಂಡುರುವಾಚ ॥

ನಾರಾಯಣ ಹರೇ ಕೃಷ್ಣ ಶ್ರೀವತ್ಸಾಂಕ ಜಗತ್ಪತೇ ।
ಜಗದ್ಬೀಜ ಜಗದ್ಧಾಮ ಜಗತ್ಸಾಕ್ಷಿನ್ನಮೋಽಸ್ತು ತೇ ॥ ೧೨೮ ॥

---

ಕೀರ್ತಿಯನ್ನು ಬಾಹುಗಳಲ್ಲಿಯೂ ಧರಿಸಿ, ನಾಲ್ಕು ತೋಳುಗಳಿಂದ ಪ್ರಕಾಶಿಸುತ್ತಿದ್ದನು. ಪೀತಾಂಬರವನ್ನು ಉಟ್ಟು ಶ್ರೀವತ್ಸವೆಂಬ ಚಿಹ್ನೆಯಿಂದಲೂ, ವನಮಾಲೆಯಿಂದಲೂ ಶೋಭಿಸುತ್ತಿದ್ದನು. ಸರ್ವಲಕ್ಷಣಸಂಪನ್ನನಾಗಿದ್ದನು. ಅನೇಕ ರತ್ನಗಳಿಂದ ಅಲಂಕೃತನಾಗಿ ದಿವ್ಯಚಂದನವನ್ನು ಪೂಸಿಕೊಂಡು, ದಿವ್ಯಮಾಲಿಕೆಯಿಂದ ಪ್ರಕಾಶಿಸುತ್ತಿದ್ದನು.

೧೨೬. ಇಂತಹ ಪರಮಾತ್ಮನನ್ನು ನೋಡಿ ಕಂಡುವು ಬಹಳ ವಿಸ್ಮಿತನಾಗಿ ಆನಂದದಿಂದ ರೋಮಾಂಚಿತನಾಗಿ ಭೂಮಿಯಲ್ಲಿ ಸಾಷ್ಟಾಂಗಪ್ರಣಾಮವನ್ನು ಮಾಡಿದನು.

೧೨೭. ಎಲೈ ಮುನಿಶ್ರೇಷ್ಠರೇ, ಅನಂತರ ಕಂಡುವು ಇಂದು ನನ್ನ ಜನ್ಮವು ಸಾರ್ಥಕವಾಯಿತು. ಇಂದಿಗೆ ನನ್ನ ತಪಸ್ಸೆಲ್ಲವೂ ಸಫಲವಾಯಿತು ಎಂದು ಹೇಳುತ್ತಾ ಪರಮಾತ್ಮನನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು.

೧೨೮. ಜಗತ್ಪತಿಯಾದ ಎಲೈ ನಾರಾಯಣನೇ, ನೀನು ಜಗತ್ಕಾರಣನು. ಶ್ರೀವತ್ಸವೆಂಬ ಚಿಹ್ನೆಯುಳ್ಳವನು. ಶತ್ರುಗಳನ್ನು ನಾಶಮಾಡುವವನು. ಜಗನ್ನಿಲಯನು. ಜಗತ್ಸಾಕ್ಷಿಯು. ಇಂತಹ ನಿನಗೆ ನಮಸ್ಕಾರಗಳು.

**ಅವ್ಯಕ್ತ ಜಿಷ್ಣೋ ಪ್ರಭವ ಪ್ರಧಾನಪುರುಷೋತ್ತಮ ।**
**ಪುಂಡರೀಕಾಕ್ಷ ಗೋವಿಂದ ಲೋಕನಾಥ ನಮೋಽಸ್ತು ತೇ　　॥ ೧೨೯ ॥**

**ಹಿರಣ್ಯಗರ್ಭ ಶ್ರೀನಾಥ ಪದ್ಮನಾಥ ಸನಾತನ ।**
**ಭೂಗರ್ಭ ಧ್ರುವ ಈಶಾನ ಹೃಷೀಕೇಶ ನಮೋಽಸ್ತು ತೇ　　॥ ೧೩೦ ॥**

**ಅನಾದ್ಯಂತಾಮೃತಾಜೇಯ ಜಯ ತ್ವಂ ಜಯತಾಂ ವರ ।**
**ಅಜಿತಾಖಂಡ ಶ್ರೀಕೃಷ್ಣ ಶ್ರೀನಿವಾಸ ನಮೋಽಸ್ತು ತೇ　　॥ ೧೩೧ ॥**

**ಪರ್ಜನ್ಯಧರ್ಮಕರ್ತಾ ಚ ದುಷ್ಪಾರ ದುರಧಿಷ್ಠಿತ ।**
**ದುಃಖಾರ್ತಿನಾಶನ ಹರೇ ಜಲಶಾಯಿನ್ನಮೋಽಸ್ತು ತೇ　　॥ ೧೩೨ ॥**

**ಭೂತಪಾವ್ಯಕ್ತ ಭೂತೇಶ ಭೂತತತ್ತ್ವೈರನಾಕುಲ ।**
**ಭೂತಾಧಿವಾಸ ಭೂತಾತ್ಮನ್ಭೂತಗರ್ಭ ನಮೋಽಸ್ತು ತೇ　　॥ ೧೩೩ ॥**

---

೧೨೯. ನೀನು ಅವ್ಯಕ್ತಸ್ವರೂಪನಾದವನು, ಸರ್ವವ್ಯಾಪಿಯು. ಪ್ರಕೃತಿ ಪುರುಷರುಗಳಲ್ಲಿ ಪ್ರಧಾನನಾದ ಪುರುಷನು, ಕಮಲಲೋಚನನು. ಸಮಸ್ತ ಲೋಕಗಳಿಗೂ ಒಡೆಯನು. ಇಂತಹ ನಿನಗೆ ನಮಸ್ಕಾರವು.

೧೩೦. ನೀನು ಹಿರಣ್ಯಗರ್ಭನು, ಲಕ್ಷ್ಮಿಯ ಪತಿಯು, ಚಿರಂತನನು, ಶಾಶ್ವತನು, ಭೂಗರ್ಭನು, ಲೋಕಾಧ್ಯಕ್ಷನು, ಹೃಷೀಕೇಶನು. ಇಂತಹ ನಿನಗೆ ನಮಸ್ಕಾರವು.

೧೩೧. ಆದ್ಯಂತರಹಿತನಾದ ನೀನು ಅಜೇಯನು, ನಾಶರಹಿತನು. ಜಯಶಾಲಿಗಳಲ್ಲಿ ಶ್ರೇಷ್ಠನಾದ ನಿನಗೆ ಜಯವಾಗಲಿ. ಅಖಂಡನೂ, ಶ್ರೀನಿವಾಸನೂ ಆದ ನಿನಗೆ ನಮಸ್ಕಾರವು.

೧೩೨. ನೀನು ವೃಷ್ಟಿಸ್ವರೂಪನು, ಧರ್ಮಕರ್ತನು. ನಿನ್ನನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ನೀನು ಧ್ಯಾನಗಮ್ಯನು. ಭಕ್ತರ ದುಃಖವನ್ನು ದೂರಮಾಡುವವನು. ಜಲಶಾಯಿಯು. ಇಂತಹ ನಿನಗೆ ನಮಸ್ಕಾರವು.

೧೩೩. ಪ್ರಾಣಿಪರಿಪಾಲಕನು ನೀನು. ಅಗೋಚರನು, ಭೂತಾಧಿಪತಿಯು, ಪ್ರಾಣಿಗಳಲ್ಲಿ ಆತ್ಮಸ್ವರೂಪನು. ಭೂತಾತ್ಮನು, ಪ್ರಾಣಿಗಳ ಅಂತರಾತ್ಮನು. ಇಂತಹ ನಿನಗೆ ನಮಸ್ಕಾರವು.

ಯಜ್ಞಾಯಜ್ವನ್ಯಜ್ಞಧರ ಯಜ್ಞಧಾತಾಭಯಪ್ರದ ।
ಯಜ್ಞಗರ್ಭ ಹಿರಣ್ಯಾಂಗ ಪೃಶ್ನಿಗರ್ಭ ನಮೋಽಸ್ತು ತೇ ॥ ೧೩೪ ॥

ಕ್ಷೇತ್ರಜ್ಞಃ ಕ್ಷೇತ್ರಭೃತ್ಕ್ಷೇತ್ರೀ ಕ್ಷೇತ್ರಹಾ ಕ್ಷೇತ್ರಕೃದ್ವಶೀ ।
ಕ್ಷೇತ್ರಾತ್ಮನ್ಕ್ಷೇತ್ರರಹಿತ ಕ್ಷೇತ್ರಸ್ರಷ್ಟ್ರೇ ನಮೋಽಸ್ತು ತೇ ॥ ೧೩೫ ॥

ಗುಣಾಲಯ ಗುಣಾವಾಸ ಗುಣಾಶ್ರಯ ಗುಣಾವಹ ।
ಗುಣಭೋಕ್ತ್ರೇ ಗುಣಾರಾಮ ಗುಣತ್ಯಾಗಿನ್ನಮೋಽಸ್ತು ತೇ ॥ ೧೩೬ ॥

ತ್ವಂ ವಿಷ್ಣುಸ್ತ್ವಂ ಹರಿಶ್ಚಕ್ರೀ ತ್ವಂ ಜಿಷ್ಣುಸ್ತ್ವಂ ಜನಾರ್ದನಃ ।
ತ್ವಂ ಭೂತಸ್ತ್ವಂ ವಷಟ್ಕಾರಸ್ತ್ವಂ ಭವ್ಯಸ್ತ್ವಂ ಭವತ್ಪ್ರಭುಃ ॥ ೧೩೭ ॥

---

೧೩೪. ಯಜ್ಞವನ್ನು ಮಾಡತಕ್ಕವನೇ ನೀನು. ಯಜ್ಞಧರನು, ಯಜ್ಞಕರ್ತನು, ಭಕ್ತರಿಗೆ ಅಭಯಪ್ರದನು, ಯಜ್ಞಗರ್ಭನು, ಹಿರಣ್ಯಗರ್ಭನು, ಇಂತಹ ನಿನಗೆ ನಮಸ್ಕಾರಗಳು.

೧೩೫. ನೀನು ಕ್ಷೇತ್ರಜ್ಞನು. ದೇಹವನ್ನು ಧರಿಸಿರುವವನು. ಕ್ಷೇತ್ರವುಳ್ಳವನೂ ನೀನೇ. ದೇಹವನ್ನು ನಾಶಮಾಡುವವನೂ, ದೇಹಕರ್ತನೂ ನೀನು. ದೇಹಸ್ವರೂಪನು. ಆದರೂ ನೀನು ದೇಹರಹಿತನು. ಹಾಗೂ ದೇಹವನ್ನು ಸೃಷ್ಟಿಸಿದವನೇ ನೀನು. ಇಂತಹ ನಿನಗೆ ನಮಸ್ಕಾರವು.

೧೩೬. ನೀನು ಗುಣಗಳಿಗೆ ಆವಾಸಸ್ಥಾನನು. ಗುಣಗಳೆಲ್ಲವೂ ನಿನ್ನಲ್ಲಿಯೇ ವಾಸವಾಗಿರುವುವು. ಗುಣಾಶ್ರಯನು ನೀನು. ಗುಣಧಾರಿಯು, ಗುಣಗಳನ್ನು ಭೋಗಿಸುವದನು. ಗುಣಗಳಿಗೆ ವಿಶ್ರಾಂತಿಸ್ಥಾನನು. ಇಷ್ಟಾದರೂ ನೀನು ನಿರ್ಗುಣನು. ಇಂತಹ ನಿನಗೆ ನಮಸ್ಕಾರವು.

೧೩೭. ನೀನು ವಿಷ್ಣುವು, ಹರಿಯು–ಚಕ್ರಧಾರಿಯೂ ನೀನೇ. ನೀನು ಜಿಷ್ಣುವೂ ಜನಾರ್ದನನೂ ಆಗಿರುವೆ. ನೀನು ಪ್ರಾಣಿಸ್ವರೂಪನು. ವಷಟ್ಕಾರನು ನೀನು. ಮುಂದಾಗತಕ್ಕವನೂ ಹಿಂದಾಗಿರುವವನೂ ನೀನೇ.

ತ್ವಂ ಭೂತಕೃತ್ತ್ವಮವ್ಯಕ್ತಸ್ತ್ವಂ ಭವೋ ಭೂತಭೃದ್ಭವಾನ್ ।
ತ್ವಂ ಭೂತಭಾವನೋ ದೇವಸ್ತ್ವಾಮಾಹುರಜಮೀಶ್ವರಂ ॥ ೧೩೮ ॥

ತ್ವಮನಂತಃ ಕೃತಜ್ಞಸ್ತ್ವಂ ಪ್ರಕೃತಿಸ್ತ್ವಂ ವೃಷಾಕಪಿಃ ।
ತ್ವಂ ರುದ್ರಸ್ತ್ವಂ ದುರಾಧರ್ಷಸ್ತ್ವಮಮೋಘಸ್ತ್ವಮೀಶ್ವರಃ ॥ ೧೩೯ ॥

ತ್ವಂ ವಿಶ್ವಕರ್ಮಾ ಜಿಷ್ಣುಸ್ತ್ವಂ ತ್ವಂ ಶಂಭುಸ್ತ್ವಂ ವೃಷಾಕೃತಿಃ ।
ತ್ವಂ ಶಂಕರಸ್ತ್ವಮುಶನಾ ತ್ವಂ ಸತ್ಯಂ ತ್ವಂ ತಪೋ ಜನಃ ॥ ೧೪೦ ॥

ತ್ವಂ ವಿಶ್ವಜೇತಾ ತ್ವಂ ಶರ್ಮ ತ್ವಂ ಶರಣ್ಯಸ್ತ್ವಮಕ್ಷರಂ ।
ತ್ವಂ ಶಂಭುಸ್ತ್ವಂ ಸ್ವಯಂಭೂಶ್ಚ ತ್ವಂ ಜ್ಯೇಷ್ಠಸ್ತ್ವಂ ಪರಾಯಣಃ ॥ ೧೪೧ ॥

ತ್ವಮಾದಿತ್ಯಸ್ತ್ವಮೋಂಕಾರಸ್ತ್ವಂ ಪ್ರಾಣಸ್ತ್ವಂ ತಮಿಸ್ರಹಾ ।
ತ್ವಂ ಪರ್ಜನ್ಯಸ್ತ್ವಂ ಪ್ರಥಿತಸ್ತ್ವಂ ವೇಧಾಸ್ತ್ವಂ ಸುರೇಶ್ವರಃ ॥ ೧೪೨ ॥

---

೧೩೮. ನೀನು ಪ್ರಾಣಿಗಳಿಗೋಸ್ಕರವಾಗಿಯೇ ಇರುವವನು. ಅಗೋಚರನು. ಪ್ರಾಣಿಗಳ ರಕ್ಷಣೆಯನ್ನು ಧರಿಸಿರುವವನು. ಪ್ರಾಣಿಗಳಲ್ಲಿ ನೆಲಸಿರುವವನು. ನೀನು ದೇವದೇವನು. ನಿನ್ನನ್ನು ಬ್ರಹ್ಮನೆಂದೂ ಈಶ್ವರನೆಂದೂ ಹೇಳುವರು.

೧೩೯. ನೀನು ಅಂತರಹಿತನು, ಕೃತಜ್ಞನು, ಪ್ರಕೃತಿಸ್ವರೂಪನು, ಹರಿಹರಾತ್ಮನು. ನೀನು ರುದ್ರನು, ಅಮೋಘಶಕ್ತಿಯುಳ್ಳವನು, ದುರಾಧರ್ಷನು ನೀನು ಈಶ್ವರನು.

೧೪೦. ನೀನು ವಿಶ್ವಕರ್ಮನು. ಜಯಶಾಲಿಯು, ಶಂಭುವು, ವೃಷಾಕೃತಿಯು, ಶಂಕರನೂ ಶುಕ್ರನೂ ನೀನೇ. ಸತ್ಯಸ್ವರೂಪನು, ತಪೋರೂಪನೂ ನೀನೇ.

೧೪೧. ನೀನು ಪ್ರಪಂಚವನ್ನೇ ಜಯಿಸಿದವನು. ನೀನು ಸುಖಸ್ವರೂಪನು, ಶರಣ್ಯನು, ನಾಶರಹಿತನು. ನೀನು ಶಂಭುವು. ಸ್ವಯಂ ಉತ್ಪತ್ತಿಯುಳ್ಳವನೂ ನೀನೇ. ಎಲ್ಲರಿಗಿಂತಲೂ ಜ್ಯೇಷ್ಠನೂ, ಶ್ರೇಷ್ಠನೂ ನೀನು.

೧೪೨. ನೀನು ಸೂರ್ಯನು, ಓಂಕಾರಸ್ವರೂಪನು, ಅಜ್ಞಾನಾಂಧಕಾರವನ್ನು ನಾಶಮಾಡುವವನು. ಪ್ರಾಣಾತ್ಮನು. ನೀನು ವೃಷ್ಟಿಸ್ವರೂಪನು. ಲೋಕದಲ್ಲಿ ಹೆಸರುಪಡೆದವನು ನೀನು. ಬ್ರಹ್ಮನೂ, ಇಂದ್ರನೂ ಸಹ ನೀನೇ.

ತ್ವಮೃಜುಃ ಸಾಗ್ಯಮು ಚೈವ ತ್ವಮಾತ್ಮಾ ಸಂಮತೋ ಭವಾನ್ ।
ತ್ವಮಗ್ನಿಸ್ತ್ವಂ ಚ ಪವನಸ್ತ್ವಮಾಪೋ ವಸುಧಾ ಭವಾನ್ ॥ ೧೪೩ ॥

ತ್ವಂ ಸ್ರಷ್ಟಾ ತ್ವಂ ತಥಾ ಭೋಕ್ತಾ ಹೋತಾ ತ್ವಂ ಚ ಹವಿಃ ಕ್ರತುಃ ।
ತ್ವಂ ಪ್ರಭುಸ್ತ್ವಂ ವಿಭುಃ ಶ್ರೇಷ್ಠಸ್ತ್ವಂ ಲೋಕಪತಿರಚ್ಯುತಃ ॥ ೧೪೪ ॥

ತ್ವಂ ಸರ್ವದರ್ಶನಃ ಶ್ರೀಮಾಂಸ್ತ್ವಂ ಸರ್ವದಮನೋಽರಿಹಾ ।
ತ್ವಮಹಸ್ತ್ವಂ ತಥಾ ರಾತ್ರಿಸ್ತ್ವಾಮಾಹುರ್ವತ್ಸರಂ ಬುಧಾಃ ॥ ೧೪೫ ॥

ತ್ವಂ ಕಾಲಸ್ತ್ವಂ ಕಲಾ ಕಾಷ್ಠಾ ತ್ವಂ ಮುಹೂರ್ತಃ ಕ್ಷಣಾ ಲವಾಃ ।
ತ್ವಂ ಬಾಲಸ್ತ್ವಂ ತಥಾ ವೃದ್ಧಸ್ತ್ವಂ ಪುಮಾಂಸ್ತ್ರೀ ನಪುಂಸಕಃ ॥ ೧೪೬ ॥

---

೧೪೩. ಋಗ್ವೇದ, ಯಜುರ್ವೇದ, ಸಾಮವೇದ ಇವೆಲ್ಲವೂ ನೀನೇ. ಸರ್ವಸಮ್ಮತನಾದ ಪರಮಾತ್ಮನು ನೀನು. ಅಗ್ನಿ ವಾಯು, ನೀರು, ಪೃಥ್ವೀ ಇವೆಲ್ಲವೂ ಸಹ ನೀನೇಆಗಿರುವೆ.

೧೪೪. ಪ್ರಪಂಚದ ಸೃಷ್ಟಿಕರ್ತನು ನೀನು. ಫಲಭೋಕ್ತೃವೂ ನೀನು. ಯಜ್ಞಮಾಡುವವನೂ, ಯಜ್ಞಕ್ಕೆ ಉಪಯೋಗಿಸುವ ಹವಿಸ್ಸೂ, ಯಜ್ಞವೂ ಸಹ ನೀನು. ನೀನು ಪ್ರಭುವು. ವ್ಯಾಪಕನೂ, ಸರ್ವಶ್ರೇಷ್ಠನೂ ನೀನು. ಲೋಕಗಳಿಗೆ ಒಡೆಯನು ನೀನು.

೧೪೫. ಮನೋಹರರೂಪನು ಸರ್ವಲಕ್ಷಣಸಂಪನ್ನನು ನೀನು. ಶತ್ರುಗಳನ್ನೆಲ್ಲಾ ನಾಶಮಾಡಿ ಅವರ ಗರ್ವವನ್ನಡಗಿಸುವವನು ನೀನು. ನಿನ್ನನ್ನು ಹಗಲು, ರಾತ್ರಿ, ವರ್ಷಗಳೆಂಬುದಾಗಿ ಜ್ಞಾನಿಗಳು ಹೇಳುವರು.

೧೪೬. ಕಾಲಸ್ವರೂಪನು ನೀನು. ಕಲಾ (ಒಂದು ಭಾಗ) ಕಾಷ (ಒಂದು ನಿಮಿಷ) ಮುಹೂರ್ತ, ಕ್ಷಣ, ಲವ (ಸ್ವಲ್ಪಭಾಗ) ಎಲ್ಲವೂ ನೀನೇ. ನೀನು ಬಾಲಕನು, ಹಾಗೂ ವೃದ್ಧನೂ ಹೌದು. ಗಂಡಸೂ ನೀನೇ. ಹೆಂಗಸೂ ನಪುಂಸಕನೂ ನೀನೇ.

ತ್ವಂ ವಿಶ್ವಯೋನಿಸ್ತ್ವಂ ಚಕ್ಷುಸ್ತ್ವಂ ಸ್ಥಾಣುಸ್ತ್ವಂ ಶುಚಿಶ್ರವಾಃ ।
ತ್ವಂ ಶಾಶ್ವತಸ್ತ್ವಮಜಿತಸ್ತ್ವಮುಪೇಂದ್ರಸ್ತ್ವಮುತ್ತಮಃ ॥ ೧೪೭ ॥

ತ್ವಂ ಸರ್ವವಿಶ್ವಸುಖದಸ್ತ್ವಂ ವೇದಾಂಗಂ ತ್ವಮವ್ಯಯಃ ।
ತ್ವಂ ವೇದವೇದಸ್ತ್ವಂ ಧಾತಾ ವಿಧಾತಾ ತ್ವಂ ಸಮಾಹಿತಃ ॥ ೧೪೮ ॥

ತ್ವಂ ಜಲನಿಧಿರಾಮೂಲಂ ತ್ವಂ ಧಾತಾ ತ್ವಂ ಪುನರ್ವಸುಃ ।
ತ್ವಂ ವೈದ್ಯಸ್ತ್ವಂ ಧೃತಾತ್ಮಾ ಚ ತ್ವಮತೀಂದ್ರಿಯಗೋಚರಃ ॥ ೧೪೯ ॥

ತ್ವಮಗ್ರಣೀರ್ಗ್ರಾಮಣೀಸ್ತ್ವಂ ತ್ವಂ ಸುಪರ್ಣಸ್ತ್ವಮಾದಿಮಾನ್ ।
ತ್ವಂ ಸಂಗ್ರಹಸ್ತ್ವಂ ಸುಮಹತ್ತ್ವಂ ಧೃತಾತ್ಮಾ ತ್ವಮಚ್ಯುತಃ ॥ ೧೫೦ ॥

ತ್ವಂ ಯಮಸ್ತ್ವಂ ಚ ನಿಯಮಸ್ತ್ವಂ ಪ್ರಾಂಶುಸ್ತ್ವಂ ಚತುರ್ಭುಜಃ ।
ತ್ವಮೇವಾನ್ನಾಂತರಾತ್ಮಾ ತ್ವಂ ಪರಮಾತ್ಮಾ ತ್ವಮುಚ್ಯತೇ ॥ ೧೫೧ ॥

---

೧೪೭. ನೀನು ಜಗತ್ಕಾರಣನು. ಚಕ್ಷುರಿಂದ್ರಿಯ ಸ್ವರೂಪನು ನೀನು. ಸ್ಥಾಣುವು, ಶುಚಿಶ್ರವನೂ ನೀನು. ನೀನು ಶಾಶ್ವತನು. ನಿನ್ನನ್ನು ಯಾರೂ ಜಯಿಸಿಲ್ಲ. ನೀನು ಉಪೇಂದ್ರನು. ಉತ್ತಮನು.

೧೪೮. ಪ್ರಪಂಚಕ್ಕೆಲ್ಲಾ ಸುಖವನ್ನುಂಟುಮಾಡುವವನು ನೀನು. ವೇದಾಂಗನೂ ನಾಶರಹಿತನೂ ನೀನು. ನೀನು ವೇದಸ್ವರೂಪವನ್ನು ತಿಳಿದವನು. ವೇದಗಳಿಗೆಲ್ಲಾ ವೇದನು. ಬ್ರಹ್ಮನೂ ನೀನೇ.

೧೪೯. ನೀನು ಸಮುದ್ರಗಳಿಗೆ ಮೂಲಸ್ಥಾನನು. ನೀನು ಬ್ರಹ್ಮನು. ಅಷ್ಟವಸುಗಳೂ ನೀನೇ. ನೀನು ವೈದ್ಯನು. ಆತ್ಮಧಾರಿಯು ನೀನೇ. ಮನೋಮಾತ್ರಗೋಚರನು.

೧೫೦. ನೀನು ಎಲ್ಲರಿಗಿಂತಲೂ ಮುಂದಾಳು. ಎಲ್ಲರನ್ನೂ ಸರಿಯಾದ ಮಾರ್ಗದಲ್ಲಿ ನಡೆಸುವವನು. ನೀನು ಸುಪರ್ಣನು. ಆದಿಪುರುಷನು, ಶ್ರೇಷ್ಠನು. ಅಂತರಾತ್ಮನೂ, ಅಚ್ಯುತನೂ ನೀನು.

೧೫೧. ಯಮನಿಯಮಾದಿಗಳ ಸ್ವರೂಪನು. ಅಣುಸ್ವರೂಪನು ಚತುರ್ಭುಜನಾದ ಪರಮಾತ್ಮನು ನೀನು. ಎಲ್ಲರ ಅಂತರಾತ್ಮನೂ ಸಹ ನೀನು.

ತ್ವಂ ಗುರುಸ್ತ್ವಂ ಗುರುತಮಸ್ತ್ವಂ ವಾಮಸ್ತ್ವಂ ಪ್ರದಕ್ಷಿಣಃ ।
ತ್ವಂ ಪಿಪ್ಪಲಸ್ತ್ವಮಗಮಸ್ತ್ವಂ ವ್ಯಕ್ತಸ್ತ್ವಂ ಪ್ರಜಾಪತಿಃ ॥ ೧೫೨ ॥

ಹಿರಣ್ಯನಾಭಸ್ತ್ವಂ ದೇವಸ್ತ್ವಂ ಶಶೀ ತ್ವಂ ಪ್ರಜಾಪತಿಃ ।
ಅನಿರ್ದೇಶ್ಯವಪುಸ್ತ್ವಂ ವೈ ತ್ವಂ ಯಮಸ್ತ್ವಂ ಸುರಾರಿಹಾ ॥ ೧೫೩ ॥

ತ್ವಂ ಚ ಸಂಕರ್ಷಣೋ ದೇವಸ್ತ್ವಂ ಕರ್ತಾ ತ್ವಂ ಸನಾತನಃ ।
ತ್ವಂ ವಾಸುದೇವೋಽಮೇಯಾತ್ಮಾ ತ್ವಮೇವ ಗುಣವರ್ಜಿತಃ ॥ ೧೫೪ ॥

ತ್ವಂ ಜ್ಯೇಷ್ಠಸ್ತ್ವಂ ವರಿಷ್ಠಸ್ತ್ವಂ ತ್ವಂ ಸಹಿಷ್ಣುಶ್ಚ ಮಾಧವಃ ।
ಸಹಸ್ರಶೀರ್ಷಾ ತ್ವಂ ದೇವಸ್ತ್ವಮವ್ಯಕ್ತಃ ಸಹಸ್ರದೃಕ್ ॥ ೧೫೫ ॥

ಸಹಸ್ರಪಾದಸ್ತ್ವಂ ದೇವಸ್ತ್ವಂ ವಿರಾಟ್ತ್ವಂ ಸುರಪ್ರಭುಃ ।
ತ್ವಮೇವ ತಿಷ್ಠಸೇ ಭೂಯೋ ದೇವದೇವ ದಶಾಂಗುಲಃ ॥ ೧೫೬ ॥

---

೧೫೨. ನೀನು ಎಲ್ಲರಿಗೂ ಗುರುವು. ಗುರುವಿಗಿಂತಲೂ ಶ್ರೇಷ್ಠನು. ಎಡಬಲಭಾಗಗಳೆಲ್ಲವೂ ನೀನೇ. ನೀನು ಪಿಪ್ಪಲನು. ನಿನ್ನನ್ನು ಹೊಂದಲು ಸುಲಭಸಾಧ್ಯವಲ್ಲ ನೀನು ಅಗೋಚರನು. ಪ್ರಜಾಪತಿಯೂ ನೀನು.

೧೫೩. ಹಿರಣ್ಯನಾಭನು, ದೇವನು, ಚಂದ್ರನು, ಬ್ರಹ್ಮನು ಎಲ್ಲವೂ ನೀನೇ. ನಿನ್ನ ಶರೀರವು ಇಂತಹುದೆಂದು ನಿರ್ದೇಶಿಸಲು ಸಾಧ್ಯವಿಲ್ಲ. ನೀನು ಯಮನು, ಶತ್ರುನಿಷೂದನನು.

೧೫೪. ಬಲರಾಮನೂ ನೀನೇ. ಸೃಷ್ಟಿಕರ್ತನೂ, ಚಿರಂತನನೂ ನೀನು. ನೀನು ವಾಸುದೇವನು. ನಿನ್ನ ಸ್ವರೂಪವು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ನೀನು ನಿರ್ಗುಣನು.

೧೫೫. ಎಲ್ಲರಿಗಿಂತಲೂ ಜ್ಯೇಷ್ಠನೂ, ಗೌರವಶಾಲಿಯೂ ನೀನು. ಸರ್ವಸಹನಾಶಕ್ತಿಯುಳ್ಳವನು, ಮಾಧವನು ನೀನು. ನಿನಗೆ ಸಾವಿರ ತಲೆಗಳೂ ಸಾವಿರ ಕಣ್ಣುಗಳೂ ಇರುವುವು. ಹೀಗಿದ್ದರೂ ನೀನು ಅಗೋಚರನು.

೧೫೬. ನಿನಗೆ ಸಹಸ್ರ ಪಾದಗಳಿರುವುವು. ನೀನು ವಿರಾಟ್ಪುರುಷನು. ಆದರೂ ದೇವತೆಗಳಿಗೆಲ್ಲಾ ಒಡೆಯನಾದ ನೀನು ಹತ್ತು ಅಂಗುಲದುದ್ದವಾಗಿರುವೆ.

ಯದ್ಭೂತಂ ತತ್ತ್ವಮೇವೋಕ್ತಃ ಪುರುಷಃ ಶಕ್ರ ಉತ್ತಮಃ ।
ಯದ್ಭಾವ್ಯಂ ತತ್ತ್ವಮೀಶಾನಸ್ತ್ವಮೃತಸ್ತ್ವಂ ತಥಾಮೃತಃ ॥ ೧೫೭ ॥

ತ್ವತ್ತೋ ರೋಹತ್ಯಯಂ ಲೋಕೋ ಮಹೀಯಾಂಸ್ತ್ವಮನುತ್ತಮಃ ।
ತ್ವಂ ಜ್ಯಾಯಾನ್ಪುರುಷಸ್ತ್ವಂ ಚ ತ್ವಂ ದೇವ ದಶಧಾ ಸ್ಥಿತಃ ೧೫೮ ॥

ವಿಶ್ವಭೂತಶ್ಚತುರ್ಭಾಗೋ ನವಭಾಗೋಽಮೃತೋ ದಿವಿ ।
ನವಭಾಗೋಽಂತರಿಕ್ಷಸ್ಥಃ ಪೌರುಷೇಯಃ ಸನಾತನಃ ॥ ೧೫೯ ॥

ಭಾಗದ್ವಯಂ ಚ ಭೂಸಂಸ್ಥಂ ಚತುರ್ಭಾಗೋಽಪ್ಯಭೂದಿಹ ।
ತ್ವತ್ತೋ ಯಜ್ಞಾಃ ಸಂಭವಂತಿ ಜಗತೋ ವೃಷ್ಟಿಕಾರಣಂ ॥ ೧೬೦ ॥

ತ್ವತ್ತೋ ವಿರಾಟ್ಸಮುತ್ಪನ್ನೋ ಜಗತೋ ಹೃದಿ ಯಃ ಪುಮಾನ್ ।
ಸೋಽತಿರಿಚ್ಯತ ಭೂತೇಭ್ಯಸ್ತೇಜಸಾ ಯಶಸಾ ಶ್ರಿಯಾ ॥ ೧೬೧ ॥

---

೧೫೭. ಹಿಂದೆ ನಡೆದುಹೋದುದೆಲ್ಲವೂ ನಿನ್ನ ತತ್ವವೇ ಮುಂದೆ ನಡೆಯಬೇಕಾದುದೂ ಸಹ ನಿನ್ನದು ಎಂದು ಹೇಳುವರು. ನೀನು ಪುರುಷನು. ಇಂದ್ರನು ದೇವತಾಧ್ಯಕ್ಷನು. ನೀನು ಸತ್ಯಸ್ವರೂಪನು ಹಾಗೂ ಅಮೃತನೂ ನೀನು.

೧೫೮. ಲೋಕವು ನಿನ್ನ ಪ್ರೇರೇಪಣೆಯಿಂದಲೇ ಬೆಳೆಯುವುದು. ನೀನು ಎಲ್ಲರಿಗಿಂತಲೂ ದೊಡ್ಡವನೂ, ಉತ್ತಮನೂ, ಜ್ಯೇಷ್ಠನೂ ಆಗಿರುವೆ. ನೀನೇ ಪುರುಷನೆಂದು ಪ್ರಖ್ಯಾತನಾಗಿರುವೆ.

೧೫೯. ನಿನ್ನ ನಾಲ್ಕು ಭಾಗವು ವಿಶ್ವದ ಪ್ರಾಣಿಗಳಲ್ಲಿಯೂ, ಒಂಭತ್ತು ಭಾಗವು ಸ್ವರ್ಗದಲ್ಲಿಯೂ, ಒಂಭತ್ತು ಭಾಗವು ಅಂತರಿಕ್ಷದಲ್ಲಿಯೂ ಇರುವುದು. ನೀನು ಚಿರಂತನನಾದ ಪರಮಪುರುಷನು.

೧೬೦. ನಿನ್ನ ಎರಡು ಭಾಗವು ಭೂಮಿಯಲ್ಲಿರುವುದು. ಈ ಲೋಕದಲ್ಲಿ ನಾಲ್ಕು ಭಾಗವಿರುವುದು. ಜಗತ್ತಿಗೆ ವೃಷ್ಟಿಯುಂಟಾಗಲು ಕಾರಣವಾದ ಯಜ್ಞಗಳು ನಿನ್ನಿಂದಲೇ ಹುಟ್ಟಿರುವುವು.

೧೬೧. ನಿನ್ನಿಂದಲೇ ವಿರಾಟ್‌ಸ್ವರೂಪವು ಹುಟ್ಟಿದುದು. ಆ ವಿರಾಟ್ ರೂಪನಾದ ನೀನೇ ಜಗತ್ತಿನ ಹೃದಯದಲ್ಲಿರುವ ಪರಮಪುರುಷನು. ಅಂತಹ

ತ್ವತ್ತಃ ಸುರಾಣಾಮಾಹಾರಃ ಪೃಷದಾಜ್ಯಮಜಾಯತ ।
ಗ್ರಾಮ್ಯಾರಣ್ಯಾಶ್ಚೌಷಧಯಸ್ತ್ವತ್ತಃ ಪಶುಮೃಗಾದಯಃ ॥ ೧೬೨ ॥

ಧ್ಯೇಯಧ್ಯಾನಪರಸ್ತ್ವಂ ಚ ಕೃತವಾನಸಿ ಚೌಷಧೀಃ ।
ತ್ವಂ ದೇವದೇವ ಸಪ್ತಾಸ್ಯ ಕಾಲಾಖ್ಯೋ ದೀಪ್ತವಿಗ್ರಹಃ ॥ ೧೬೩ ॥

ಜಂಗಮಾಜಂಗಮಂ ಸರ್ವಂ ಜಗದೇತಚ್ಚರಾಚರಂ ।
ತ್ವತ್ತಃ ಸರ್ವಮಿದಂ ಜಾತಂ ತ್ವಯಿ ಸರ್ವಂ ಪ್ರತಿಷ್ಠಿತಂ ॥ ೧೬೪ ॥

ಅನಿರುದ್ಧಸ್ತ್ವಂ ಮಾಧವಸ್ತ್ವಂ ಪ್ರದ್ಯುಮ್ನಃ ಸುರಾರಿಹಾ ।
ದೇವ ಸರ್ವಸುರಶ್ರೇಷ್ಠ ಸರ್ವಲೋಕಪರಾಯಣ ॥ ೧೬೫ ॥

---

ಪುರುಷನು ತೇಜಸ್ಸಿನಿಂದಲೂ, ಕೀರ್ತಿಯಿಂದಲೂ, ಸಂಪತ್ತಿನಿಂದಲೂ ಸಮಸ್ತ ಪ್ರಾಣಿಗಳಿಗಿಂತಲೂ ಶ್ರೇಷ್ಠನು.

೧೬೨. ದೇವತೆಗಳಿಗೆ ಆಹಾರವಾದ ಪೃಷದಾಜ್ಯವು (ಹವಿಸ್ಸು) ನಿನ್ನಿಂದಲೇ ಉಂಟಾದುದು. ಗ್ರಾಮ್ಯಾರಣ್ಯಪಶುಗಳೂ, ಓಷಧಿವನಸ್ಪತಿಗಳೂ ನಿನ್ನಿಂದಲೇ ಉಂಟಾದವು.

೧೬೩. ಧ್ಯಾನಮಾಡಲು ಯೋಗ್ಯನಾಗಿರುವವನೂ ನೀನೇ. ಧ್ಯಾನಪರನೂ ನಿನೇ. ಪ್ರಪಂಚದಲ್ಲಿರುವ ಓಷಧಿಗಳೆಲ್ಲಕ್ಕೂ ನೀನೇ ಕರ್ತೃವು ನೀನು ದೇವತೆಗಳಿಗೆಲ್ಲಾ ದೇವತೆಯು. ಏಳು ಮುಖಗಳನ್ನುಳ್ಳ ತೇಜಸ್ವಿಯಾದ ಕಾಲಪುರುಷನು ನೀನು.

೧೬೪. ಜಂಗಮಾಜಂಗಮವೂ, ಚರಾಚರಾತ್ಮಕವೂ ಆದ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಸೃಷ್ಟಿಯಾದುದು ಎಲ್ಲವೂ ನಿನ್ನಲ್ಲಿಯೇ ಐಕ್ಯವಾಗಿರುವುದು.

೧೬೫. ನೀನು ಅನಿರುದ್ಧನು, ಮಾಧವನು, ಪ್ರದ್ಯುಮ್ನನು ದೇವತೆಗಳ ಶತ್ರುಗಳನ್ನು ನಾಶಮಾಡತಕ್ಕವನು ದೇವತಾಶ್ರೇಷ್ಠನು ನೀನು, ಸರ್ವಲೋಕರಕ್ಷಕನು ನೀನು.

ತ್ರಾಹಿ ಮಾಮರವಿಂದಾಕ್ಷ ನಾರಾಯಣ ನಮೋಽಸ್ತು ತೇ ।
ನಮಸ್ತೇ ಭಗವನ್ವಿಷ್ಣೋ ನಮಸ್ತೇ ಪುರುಷೋತ್ತಮ ॥ ೧೬೬ ॥

ನಮಸ್ತೇ ಸರ್ವಲೋಕೇಶ ನಮಸ್ತೇ ಕಮಲಾಲಯ ।
ಗುಣಾಲಯ ನಮಸ್ತೇಽಸ್ತು ನಮಸ್ತೇಽಸ್ತು ಗುಣಾಕರ ॥ ೧೬೭ ॥

ವಾಸುದೇವ ನಮಸ್ತೇಽಸ್ತು ನಮಸ್ತೇಽಸ್ತು ಸುರೋತ್ತಮ ।
ಜನಾರ್ದನ ನಮಸ್ತೇಽಸ್ತು ನಮಸ್ತೇಽಸ್ತು ಸನಾತನ ॥ ೧೬೮ ॥

ನಮಸ್ತೇ ಯೋಗಿನಾಂ ಗಮ್ಯ ಯೋಗಾವಾಸ ನಮೋಽಸ್ತು ತೇ ।
ಗೋಪತೇ ಶ್ರೀಪತೇ ವಿಷ್ಣೋ ನಮಸ್ತೇಽಸ್ತು ಮರುತ್ಪತೇ ॥ ೧೬೯ ॥

ಜಗತ್ಪತೇ ಜಗತ್ಸೂತೇ ನಮಸ್ತೇ ಜ್ಞಾನಿನಾಂ ಪತೇ ।
ದಿವಸ್ಪತೇ ನಮಸ್ತೇಽಸ್ತು ನಮಸ್ತೇಽಸ್ತು ಮಹೀಪತೇ ॥ ೧೭೦ ॥

---

೧೬೬. ಕಮಲನೇತ್ರನಾದ ಓ ನಾರಾಯಣನೇ, ನಿನಗೆ ನಮಸ್ಕಾರವು ನನ್ನನ್ನು ಕಾಪಾಡು. ನೀನು ಷಡ್ಗುಣೈಶ್ವರ್ಯಸಂಪನ್ನನು, ಪುರುಷೋತ್ತಮನು. ಇಂತಹ ನಿನಗೆ ನಮಸ್ಕಾರವು.

೧೬೭. ಸರ್ವಲೋಕಾಧಿಪತಿಯಾದ ಲಕ್ಷ್ಮೀಶನೇ, ನಿನಗೆ ನಮಸ್ಕಾರವು. ನೀನು ಗುಣಾಲಯನು, ಗುಣಗಳಿಗೆ ಸಮುದ್ರನಂತಿರುವವನು. ಇಂತಹ ನಿನಗೆ ನಮಸ್ಕಾರವು.

೧೬೮-೧೬೯. ದೇವತಾಶ್ರೇಷ್ಠನಾದ ವಾಸುದೇವನೇ, ನಿನಗೆ ನಮಸ್ಕಾರವು. ನೀನು ಜನಾರ್ದನನು, ಚಿರಂತನನು. ಯೋಗಿಗಳಿಗೆ ಧ್ಯಾನಗಮ್ಯನು ನೀನು ಯೋಗಾವಾಸನಾದ ನಿನಗೆ ನಮಸ್ಕಾರವು, ಗೋವುಗಳಿಗೆಲ್ಲಾ ಒಡೆಯನು ನೀನು. ಲಕ್ಷ್ಮೀಪತಿಯೂ, ವಿಷ್ಣುವೂ, ಮರುತಾಧಿಪನೂ ಆದ ನಿನಗೆ ನಮಸ್ಕಾರವು.

೧೭೦-೧೭೧. ಜಗತ್ಪೂಜ್ಯನೂ, ಜಗತ್ಕರ್ತೃವೂ ಆದ ನಿನಗೆ ನಮಸ್ಕಾರವು. ಜ್ಞಾನಿಗಳಿಗೆ ಒಡೆಯನು ನೀನು. ದಿವಸ್ಪತಿಯು, ಮಹೀಪತಿಯು ನೀನು

ನಮಸ್ತೇ ಮಧುಹಂತ್ರೇ ಚ ನಮಸ್ತೇ ಪುಷ್ಕರೇಕ್ಷಣ ।
ಕೈಟಭಘ್ನ ನಮಸ್ತೇಽಸ್ತು ಸುಬ್ರಹ್ಮಣ್ಯ ನಮೋಽಸ್ತು ತೇ ॥ ೧೭೧ ॥

ನಮೋಽಸ್ತು ತೇ ಮಹಾಮೀನ ಶ್ರುತಿಪೃಷ್ಠಧರಾಚ್ಯುತ ।
ಸಮುದ್ರಸಲಿಲಕ್ಷೋಭ ಪದ್ಮಜಾಹ್ಲಾದಕಾರಿಣೇ ॥ ೧೭೨ ॥

ಅಶ್ವಶೀರ್ಷ ಮಹಾಘೋಣ ಮಹಾಪುರುಷವಿಗ್ರಹ ।
ಮಧುಕೈಟಭಹಂತ್ರೇ ಚ ನಮಸ್ತೇ ತುರಗಾನನ ॥ ೧೭೩ ॥

ಮಹಾಕಮಠಭೋಗಾಯ ಪೃಥಿವ್ಯುದ್ಧರಣಾಯ ಚ ।
ವಿಧೃತಾದ್ರಿಸ್ವರೂಪಾಯ ಮಹಾಕೂರ್ಮಾಯ ತೇ ನಮಃ ॥ ೧೭೪ ॥

ನಮೋ ಮಹಾವರಾಹಾಯ ಪೃಥಿವ್ಯುದ್ಧಾರಕಾರಿಣೇ ।
ನಮಶ್ಚಾದಿವರಾಹಾಯ ವಿಶ್ವರೂಪಾಯ ವೇಧಸೇ ॥ ೧೭೫ ॥

---

ಇಂತಹ ನಿನಗೆ ನಮಸ್ಕಾರವು. ಮಧುಕೈಟಭರನ್ನು ಕೊಂದವನು ನೀನು. ಸುಬ್ರಹ್ಮಣ್ಯನಾದ ನಿನಗೆ ನಮಸ್ಕಾರವು.

೧೭೨. ಮಹಾಮತ್ಸ್ಯರೂಪನಾದ ನೀನು ವೇದವನ್ನು ಬೆನ್ನಿನಮೇಲೆ ಹೊತ್ತು ತಂದೆ. ಕೂರ್ಮಾವತಾರಮಾಡಿ ಸಮುದ್ರದ ನೀರನ್ನು ಅತೋಲಕಲ್ಲೋಲ ಮಾಡಿದೆ. ಪದ್ಮನಿಲಯಳಾದ ಲಕ್ಷ್ಮಿಗೆ ಸಂತೋಷವನ್ನುಂಟುಮಾಡುವವನು. ಇಂತಹ ನಿನಗೆ ನಮಸ್ಕಾರವು.

೧೭೩-೧೭೪. ಕುದುರೆಯಂತೆ ತಲೆಯೂ, ದೊಡ್ಡ ದವಡೆಯೂ ಇರುವ ಮಹಾಪುರುಷ ವಿಗ್ರಹನಾದ ನಿನಗೆ ನಮಸ್ಕಾರವು. ಆ ಹಯಗ್ರೀವರೂಪವನ್ನು ಧರಿಸಿ ಮಧು ಕೈಟಭರನ್ನು ಸಂಹರಿಸಿದೆ. ಪೃಥಿವಿಯನ್ನು ಉದ್ಧಾರಮಾಡಲು ಕೂರ್ಮಾವತಾರ ಮಾಡಿದೆ. ಮತ್ತು ಮಂದರಾದ್ರಿಯನ್ನು ಕಡೆಯುವಾಗ ಸಮುದ್ರದಲ್ಲಿ ಮುಳುಗಿಹೋದ ಆ ಪರ್ವತವನ್ನು ಬೆನ್ನಿನಿಂದ ಎತ್ತಿದ ಮಹಾಕೂರ್ಮನಾದ ನಿನಗೆ ನಮಸ್ಕಾರವು.

೧೭೫-೧೭೬. ಪೃಥಿವಿಯನ್ನು ಉದ್ಧಾರಮಾಡಲು ವರಾಹರೂಪವನ್ನು ಧರಿಸಿದೆ. ಇಂತಹ ಆದಿವರಾಹನಿಗೆ ನಮಸ್ಕಾರವು. ವಿಶ್ವರೂಪನೂ, ಬ್ರಹ್ಮನೂ

ನಮೋಽನಂತಾಯ ಸೂಕ್ಷ್ಮಾಯ ಮುಖ್ಯಾಯ ಚ ವರಾಯ ಚ ।
ಪರಮಾಣುಸ್ವರೂಪಾಯ ಯೋಗಿಗಮ್ಯಾಯ ತೇ ನಮಃ ॥ ೧೭೬ ॥

ತಸ್ಮೈ ನಮಃ ಕಾರಣಕಾರಣಾಯ
ಯೋಗೀಂದ್ರವೃತ್ತನಿಲಯಾಯ ಸುದುರ್ವಿದಾಯ ।
ಕ್ಷೀರಾರ್ಣವಾಶ್ರಿತಮಹಾಹಿಸುತಲ್ಪಗಾಯ
ತುಭ್ಯಂ ನಮಃ ಕನಕರತ್ನಸುಕುಂಡಲಾಯ ॥ ೧೭೭ ॥

॥ ವ್ಯಾಸ ಉವಾಚ ॥

ಇತ್ಥಂ ಸ್ತುತಸ್ತದಾ ತೇನ ಪ್ರೀತಃ ಪ್ರೋವಾಚ ಮಾಧವಃ ।
ಕ್ಷಿಪ್ರಂ ಬ್ರೂಹಿ ಮುನಿಶ್ರೇಷ್ಠ ಮತ್ತೋ ಯದಭಿವಾಂಛಸಿ ॥ ೧೭೮ ॥

॥ ಕಂಡುರುವಾಚ ॥

ಸಂಸಾರೇಽಸ್ಮಿನ್ ಜಗನ್ನಾಥ ದುಸ್ತರೇ ಲೋಮಹರ್ಷಣೇ ।
ಅನಿತ್ಯೇ ದುಃಖಬಹುಲೇ ಕದಲೀದಲಸಂನಿಭೇ ॥ ೧೭೯ ॥

---

ನೀನು. ಅಂತರರಾತ್ಮನೂ, ಸೂಕ್ಷ್ಮನೂ ಆದ ನಿನಗೆ ನಮಸ್ಕಾರವು. ಎಲ್ಲರಿಗಿಂತಲೂ ಮುಖ್ಯನೂ, ಶ್ರೇಷ್ಠನೂ, ಪರಮಾಣುಸ್ವರೂಪನೂ ನೀನು. ಯೋಗಿಗಳಿಗೆ ಧ್ಯಾನಗಮ್ಯನು. ಇಂತಹ ನಿನಗೆ ನಮಸ್ಕಾರವು.

೧೭೭. ಕಾರಣಗಳಿಗೆಲ್ಲಾ ಕಾರಣನು ನೀನು. ಯೋಗೀಶ್ವರರ ತಪಸ್ಸಿಗೆ ವಿಷಯನಾದವನು. ನಿನ್ನನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ನಿನಗೆ ಕ್ಷೀರಸಾಗರದಲ್ಲಿರುವ ಆದಿಶೇಷನೇ ಹಾಸಿಗೆಯು. ಕನಕರತ್ನ ಕುಂಡಲಗಳಿಂದ ಶೋಭಿಸುತ್ತಿರುವ ನಿನಗೆ ನಮಸ್ಕಾರವು.

೧೭೮. ಈರೀತಿಯಾಗಿ ಕಂಡುವು ವಾಸುದೇವನನ್ನು ನಾನಾವಿಧವಾಗಿ ಸ್ತೋತ್ರಮಾಡಿದನು. ಇದರಿಂದ ಪ್ರೀತನಾದ ಮಾಧವನು ಅವನನ್ನು ಕುರಿತು ಎಲೈ ಮುನಿಶ್ರೇಷ್ಠನೇ, ನಾನು ಸಂತುಷ್ಟನಾದೆನು. ನಿನಗೆ ಬೇಕಾದುದನ್ನು ಜಾಗ್ರತೆಯಾಗಿ ಕೇಳಿಕೋ ಎಂದನು.

೧೭೯. ಅದಕ್ಕೆ ಕಂಡುವು—ಎಲೈ ಜಗನ್ನಾಥನೇ, ಈ ಸಂಸಾರವು ಅನಿತ್ಯವಾದುದು. ಇದನ್ನು ದಾಟುವುದು ಬಲು ಕಷ್ಟವು. ಇದರ ಸ್ಮರಣೆ

ನಿರಾಶ್ರಯೇ ನಿರಾಲಂಬೇ ಜಲಬುದ್ಬುದಚಂಚಲೇ ।
ಸರ್ವೋಪದ್ರವಸಂಯುಕ್ತೇ ದುಸ್ತರೇ ಚಾತಿಭೈರವೇ ॥ ೧೮೦ ॥

ಭ್ರಮಾಮಿ ಸುಚಿರಂ ಕಾಲಂ ಮಾಯಯಾ ಮೋಹಿತಸ್ತವ ।
ನ ಚಾಂತಮಭಿಗಚ್ಛಾಮಿ ವಿಷಯಾಸಕ್ತಮಾನಸಃ ॥ ೧೮೧ ॥

ತ್ವಾಮಹಂ ಚಾದ್ಯ ದೇವೇಶ ಸಂಸಾರಭಯಪೀಡಿತಃ ।
ಗತೋಽಸ್ಮಿ ಶರಣಂ ಕೃಷ್ಣ ಮಾಮುದ್ಧರ ಭವಾರ್ಣವಾತ್ ॥ ೧೮೨ ॥

ಗಂತುಮಿಚ್ಛಾಮಿ ಪರಮಂ ಪದಂ ಯತ್ತೇ ಸನಾತನಂ ।
ಪ್ರಸಾದಾತ್ತವ ದೇವೇಶ ಪುನರಾವೃತ್ತಿದುರ್ಲಭಂ ॥ ೧೮೩ ॥

---

ಯಿಂದ ರೋಮಾಂಚವಾಗುವುದು. ಇದು ದುಃಖಮಯವಾದುದು. ಬಾಳೆಯ ಎಲೆಯಂತೆ ಸದಾ ಚಂಚಲವಾದುದು.

೧೮೦. ಈ ಸಂಸಾರವು ಆಶ್ರಯವಿಲ್ಲದುದು. ನಿರಾಲಂಬನವಾದುದು. ನೀರಮೇಲಣ ಗುಳ್ಳೆಯಂದದಿ ಬಹಳ ಚಂಚಲವೂ ಕ್ಷಣಿಕವೂ ಆದುದು. ನಾನಾ ವಿಧವಾದ ತೊಂದರೆಯಿಂದ ಕೂಡಿರುವುದು. ಬಹಳ ಭಯಂಕರವಾದುದು.

೧೮೧. ಇಂತಹ ಸಂಸಾರದಲ್ಲಿ ಮಾಯಾಜಾಲಕ್ಕೊಳಗಾಗಿ ಬಹು ಕಾಲದವರೆಗೂ ಸಂಚರಿಸಿದೆನು. ಕಾಮಿನೀ ಮುಂತಾದ ವಿಷಯಸುಖಗಳಲ್ಲಿ ಮಗ್ನನಾಗಿ ಇದುವರೆವಿಗೂ ಅದರ ಕೊನೆಯನ್ನೇ ಮುಟ್ಟಲಿಲ್ಲ.

೧೮೨. ಈಗ ನಾನು ಸಂಸಾರಭಯದಿಂದ ಪೀಡಿತನಾಗಿ ನಿನ್ನನ್ನು ಶರಣು ಹೊಂದಿರುವೆನು. ಎಲೈ ಕೃಷ್ಣನೇ, ಸಂಸಾರಸಾಗರದಿಂದ ನನ್ನನ್ನು ಉದ್ಧಾರಮಾಡು.

೧೮೩ ನಿನ್ನ ಅನುಗ್ರಹದಿಂದ ಪುನಃ ಈ ಲೋಕಕ್ಕೆ ಬಾರದಂತಹ ಚಿರಂತನವೂ ಶ್ರೇಷ್ಠವೂ ಆದ ನಿನ್ನ ಸ್ಥಾನವನ್ನು ಹೊಂದಲಪೇಕ್ಷಿಸಿರುವೆನು. ನನಗದನ್ನು ಅನುಗ್ರಹಿಸು ಎಂದನು.

॥ ಶ್ರೀಭಗವಾನುವಾಚ ॥

ಭಕ್ತೋಽಸಿ ಮೇ ಮುನಿಶ್ರೇಷ್ಠ ಮಾಮಾರಾಧಯ ನಿತ್ಯಶಃ ।
ಮತ್ಪ್ರಸಾದಾದ್ಧ್ರುವಂ ಮೋಕ್ಷಂ ಪ್ರಾಪ್ಸ್ಯಸಿ ತ್ವಂ ಸಮಾಹಿತಂ ॥ ೧೮೪ ॥

ಮದ್ಭಕ್ತಾಃ ಕ್ಷತ್ರಿಯಾ ವೈಶ್ಯಾಃ ಸ್ತ್ರಿಯಃ ಶೂದ್ರಾಂತ್ಯಜಾತಿಜಾಃ ।
ಪ್ರಾಪ್ನುವಂತಿ ಪರಾಂ ಸಿದ್ಧಿಂ ಕಿಂ ಪುನಸ್ತ್ವಂ ದ್ವಿಜೋತ್ತಮ ॥ ೧೮೫ ॥

ಶ್ವಪಾಕೋಽಪಿ ಚ ಮದ್ಭಕ್ತಃ ಸಮ್ಯಕ್ಶ್ರದ್ಧಾಸಮನ್ವಿತಃ ।
ಪ್ರಾಪ್ನೋತ್ಯಭಿಮತಾಂ ಸಿದ್ಧಿಮನ್ಯೇಷಾಂ ತತ್ರ ಕಾ ಕಥಾ ॥ ೧೮೬ ॥

॥ ವ್ಯಾಸ ಉವಾಚ ॥

ಏವಮುಕ್ತ್ವಾ ತು ತಂ ವಿಪ್ರಾಃ ಸ ದೇವೋ ಭಕ್ತವತ್ಸಲಃ ।
ದುರ್ವಿಜ್ಞೇಯಗತಿರ್ವಿಷ್ಣುಸ್ತತ್ರೈವಾಂತರಧೀಯತ ॥ ೧೮೭ ॥

---

೧೮೪. ಅನಂತರ ಶ್ರೀ ಭಗವಂತನು—ಎಲೈ ಮುನಿವರನೇ, ನೀನು ನನ್ನ ಭಕ್ತನಾಗಿರುವೆ. ನನ್ನನ್ನು ನೀನು ನಿತ್ಯವೂ ಭಕ್ತಿಯಿಂದ ಪೂಜಿಸು ನನ್ನ ಪ್ರಸಾದದಿಂದ ನಿನಗಿಷ್ಟವಾದುದನ್ನು ಹೊಂದುವೆ.

೧೮೫. ಕ್ಷತ್ರಿಯ, ವೈಶ್ಯ, ಸ್ತ್ರೀ, ಶೂದ್ರ, ನೀಚಜಾತಿಯವರು, ಇವರುಗಳಲ್ಲಿ ಯಾರಾದರೂ ಸರಿಯೇ ನನ್ನ ಭಕ್ತರಾದರೆ ಶ್ರೇಷ್ಠವಾದ ಸಿದ್ಧಿಯನ್ನು ಹೊಂದುವರು. ಇನ್ನು ಬ್ರಾಹ್ಮಣಶ್ರೇಷ್ಠನಾದ ನೀನು ಈರೀತಿ ಪ್ರವರ್ತಿಸಿದಲ್ಲಿ ಹೇಳಬೇಕಾದುದೇನಿದೆ ?

೧೮೬. ಶ್ವಪಾಕ (ನಾಯಿಯನ್ನು ತಿನ್ನುವವನು) ನಾದ ಚಂಡಾಲನೇ ಆಗಲೀ ಶ್ರದ್ಧಾಭಕ್ತಿಗಳಿಂದ ಕೂಡಿ ನನ್ನನ್ನು ಪೂಜಿಸಿದ್ದೇ ಆದರೆ ತನಗಿಷ್ಟವಾದ ಸಿದ್ಧಿಯನ್ನು ಪಡೆಯುವನು. ಹೀಗಿರುವಲ್ಲಿ ಬೇರೆ ಜಾತಿಯವರ ವಿಷಯವನ್ನು ಹೇಳಬೇಕಾದುದೇನಿದೆ ಎಂದನು.

೧೮೭. ಭಕ್ತವತ್ಸಲನಾದ ವಿಷ್ಣುವು ಈರೀತಿಯಾಗಿ ಹೇಳಿ ಅಂತರ್ಧಾನನಾದನು. ಆ ಪರಮಾತ್ಮನ ಗಮನವನ್ನು ಯಾರುತಾನೇ ತಿಳಿಯಬಲ್ಲರು.

ಗತೇ ತಸ್ಮಿನ್ಮುನಿಶ್ರೇಷ್ಠಾಃ ಕಂಡುಃ ಸಂಹೃಷ್ಟಮಾನಸಃ ।
ಸರ್ವಾನ್ಕಾಮಾನ್ಪರಿತ್ಯಜ್ಯ ಸ್ವಸ್ಥಚಿತ್ತೋ ಭವತ್ಪುನಃ ॥ ೧೮೮ ॥

ಸರ್ವೇಂದ್ರಿಯಾಣಿ ಸಂಯಮ್ಯ ನಿರ್ಮಮೋ ನಿರಹಂಕೃತಿಃ ।
ಏಕಾಗ್ರಮಾನಸಃ ಸಮ್ಯಗ್ಧ್ಯಾತ್ವಾ ತಂ ಪುರುಷೋತ್ತಮಂ ॥ ೧೮೯ ॥

ನಿರ್ಲೇಪಂ ನಿರ್ಗುಣಂ ಶಾಂತಂ ಸತ್ತಾಮಾತ್ರವ್ಯವಸ್ಥಿತಂ ।
ಅವಾಪ ಪರಮಂ ಮೋಕ್ಷಂ ಸುರಾಣಾಮಪಿ ದುರ್ಲಭಂ ॥ ೧೯೦ ॥

ಯಃ ಪಠೇಚ್ಛೃಣುಯಾದ್ವಾಪಿ ಕಥಾಂ ಕಂಡೋರ್ಮಹಾತ್ಮನಃ ।
ವಿಮುಕ್ತಃ ಸರ್ವಪಾಪೇಭ್ಯಃ ಸ್ವರ್ಗಲೋಕಂ ಸ ಗಚ್ಛತಿ ॥ ೧೯೧ ॥

ಏವಂ ಮಯಾ ಮುನಿಶ್ರೇಷ್ಠಾಃ ಕರ್ಮಭೂಮಿರುದಾಹೃತಾ ।
ಮೋಕ್ಷಕ್ಷೇತ್ರಂ ಚ ಪರಮಂ ದೇವಂ ಚ ಪುರುಷೋತ್ತಮಂ ॥ ೧೯೨ ॥

---

೧೮೮. ವಿಷ್ಣುವು ಅಂತರ್ಧಾನನಾಗಲು ಕಂಡುವು ಬಹಳ ಸಂತೋಷ ಚಿತ್ತನಾಗಿ ಎಲ್ಲಾ ಆಸೆಗಳನ್ನೂ ಬಿಟ್ಟು ನಿಷ್ಕಾಮನಾಗಿ ಇರುತ್ತಿದ್ದನು.

೧೮೯-೧೯೦. ಸರ್ವೇಂದ್ರಿಯಗಳನ್ನೂ ಸಂಯಮನ ಮಾಡಿಕೊಂಡು ಅಹಂಕಾರ, ಮಮಕಾರಗಳನ್ನು ಬಿಟ್ಟು ಏಕಾಗ್ರಚಿತ್ತನಾಗಿ ನಿರ್ಲೇಪನೂ, ನಿರ್ಗುಣನೂ, ಶಾಂತನೂ ಆದ ಪರಮಾತ್ಮನನ್ನು ಧ್ಯಾನಿಸಿ ಭಜಿಸಿ ದೇವತೆ ಗಳಿಗೂ ದುರ್ಲಭವಾದ ಪವಿತ್ರವಾದ ಮೋಕ್ಷವನ್ನು ಪಡೆದನು.

೧೯೧. ಯಾವನು ಮಹಾತ್ಮನಾದ ಕಂಡುವಿನ ಕಥೆಯನ್ನು ಓದುವನೋ ಮತ್ತು ಕೇಳುವನೋ ಅವನ ಪಾಪಗಳೆಲ್ಲವೂ ನಾಶವಾಗಿ ಅವನು ಸ್ವರ್ಗಕ್ಕೆ ಹೋಗುವನು.

೧೯೨. ಎಲೈ ಮುನಿವರರೇ, ಈರೀತಿಯಾಗಿ ನಾನು ಕರ್ಮಭೂಮಿಯೂ, ಮೋಕ್ಷಕ್ಷೇತ್ರವೂ ಆದ ಪುರುಷೋತ್ತಮವೆಂಬ ಕ್ಷೇತ್ರದ ಮಾಹಾತ್ಮೆಯನ್ನೂ, ವಾಸುದೇವನ ಮಹಿಮೆಯನ್ನೂ ಹೇಳಿರುವೆನು.

**ಯೇ ಪಶ್ಯಂತಿ ವಿಭುಂ ಸ್ತುವಂತಿ ವರದಂ ಧ್ಯಾಯಂತಿ ಮುಕ್ತಿಪ್ರದಂ**
**ಭಕ್ತ್ಯಾ ಶ್ರೀಪುರುಷೋತ್ತಮಾಖ್ಯಮಜರಂ ಸಂಸಾರದುಃಖಾಪಹಂ ।**
**ತೇ ಭುಕ್ತ್ವಾ ಮನುಜೇಂದ್ರಭೋಗಮತುಲಾಃ ಸ್ವರ್ಗೇ ಚ ದಿವ್ಯಂ ಸುಖಂ**
**ಪಶ್ಚಾದ್ಯಾಂತಿ ಸಮಸ್ತದೋಷರಹಿತಾಃ ಸ್ಥಾನಂ ಹರೇರವ್ಯಯಂ ॥ ೧೯೩ ॥**

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಸ್ವಯಂಭುಋಷಿಸಂವಾದೇ**
**ಕಂಡೋರುಪಾಖ್ಯಾನನಿರೂಪಣಂ ನಾಮಾಷ್ಟ-**
**ಸಪ್ತತ್ಯಧಿಕಶತತಮೋಽಧ್ಯಾಯಃ**

---

೧೯೩. ಸರ್ವವ್ಯಾಪಕನೂ ವರಪ್ರದನೂ ಆದ ಪರಮಾತ್ಮನನ್ನು ಯಾರು ಭಕ್ತಿಯಿಂದ ನೋಡುವರೋ, ಮತ್ತು ಧ್ಯಾನಮಾಡುವರೋ, ಸಂಸಾರದ ದುಃಖವನ್ನು ದೂರಮಾಡುವ ಪುರುಷೋತ್ತಮ ಕ್ಷೇತ್ರವನ್ನು ಯಾರು ದರ್ಶನಮಾಡುವರೋ ಅವರೆಲ್ಲರೂ ಮನುಜರಿಗೆ ಶ್ರೇಷ್ಠವಾದ ಭೋಗಗಳನ್ನನುಭವಿಸಿ ಅನಂತರ ಸ್ವರ್ಗಕ್ಕೆ ಹೋಗಿ ಅಲ್ಲಿ ದಿವ್ಯವಾದ ಸುಖವನ್ನನುಭವಿಸುವರು. ಅನಂತರ ಸಮಸ್ತದೋಷರಹಿತವೂ ನಿತ್ಯವೂ ಆದ ಹರಿಯ ಪರಮಪದವೆಂಬ ಸ್ಥಾನವನ್ನು ಪಡೆಯುವರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಸ್ವಯಂಭುಋಷಿಸಂವಾದದಲ್ಲಿ ಕಂಡುವಿನ
ಉಪಾಖ್ಯಾನನಿರೂಪಣವೆಂಬ ನೂರೆಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ಏಕೋನಾಶೀತ್ಯಧಿಕಶತತಮೋಽಧ್ಯಾಯಃ



॥ ಲೋಮಹರ್ಷಣ ಉವಾಚ ॥

ವ್ಯಾಸಸ್ಯ ವಚನಂ ಶ್ರುತ್ವಾ ಮುನಯಃ ಸಂಯತೇಂದ್ರಿಯಾಃ ।
ಪ್ರೀತಾ ಬಭೂವುಃ ಸಂಹೃಷ್ಟಾ ವಿಸ್ಮಿತಾಶ್ಚ ಪುನಃ ಪುನಃ ॥ ೧ ॥

॥ ಮುನಯ ಊಚುಃ ॥

ಅಹೋ ಭಾರತವರ್ಷಸ್ಯ ತ್ವಯಾ ಸಂಕೀರ್ತಿತಾ ಗುಣಾಃ ।
ತದ್ವಚ್ಛ್ರೀಪುರುಷಾಖ್ಯಸ್ಯ ಕ್ಷೇತ್ರಸ್ಯ ಪುರುಷೋತ್ತಮ ॥ ೨ ॥

---

### ನೂರೆಪ್ಪತ್ತೊಂಭತ್ತನೆಯ ಅಧ್ಯಾಯವು

೧. ಲೋಮಹರ್ಷಣನು (ಸೂತನು) ಹೇಳಿದನು—ವ್ಯಾಸನು ಹೇಳಿದುದನ್ನು ಕೇಳಿ ಜಿತೇಂದ್ರಿಯರಾದ ಋಷಿಗಳೆಲ್ಲರೂ ಬಹಳ ಸಂತೋಷಗೊಂಡರು. ಅದನ್ನು ಕೇಳಿ ಅವರಿಗೆ ಬಹಳ ಆಶ್ಚರ್ಯವಾಯಿತು.

೨. ಆಮೇಲೆ ಆ ಮುನಿಗಳೆಲ್ಲರೂ ಇಂತು ಪ್ರಶ್ನೆಮಾಡಿದರು—ಭರತಭೂಮಿಯ ಅಮೋಘವಾದ ಗುಣವನ್ನು ಆಶ್ಚರ್ಯಕರವಾಗಿ ವರ್ಣಿಸಿರುವೆ. ಅದರಂತೆಯೇ ಪರಮಪವಿತ್ರವಾದ ಪುರುಷೋತ್ತಮ ಕ್ಷೇತ್ರದ ಮಹಿಮೆಯನ್ನೂ ವರ್ಣಿಸಿರುವೆ.

ವಿಸ್ಮಯೋ ಹಿ ನ ಚೈಕಸ್ಯ ಶ್ರುತ್ವಾ ಮಾಹಾತ್ಮ್ಯಮುತ್ತಮಂ ।
ಪುರುಷಾಖ್ಯಸ್ಯ ಕ್ಷೇತ್ರಸ್ಯ ಪ್ರೀತಿಶ್ಚ ವದತಾಂ ವರ ॥ ೩ ॥

ಚಿರಾತ್ಪ್ರಭೃತಿ ಚಾಸ್ಮಾಕಂ ಸಂಶಯೋ ಹೃದಿ ವರ್ತತೇ ।
ತ್ವದೃತೇ ಸಂಶಯಸ್ಯಾಸ್ಯ ಚ್ಛೇತ್ತಾ ನಾನ್ಯೋಽಸ್ತಿ ಭೂತಲೇ ॥ ೪ ॥

ಉತ್ಪತ್ತಿಂ ಬಲದೇವಸ್ಯ ಕೃಷ್ಣಸ್ಯ ಚ ಮಹೀತಲೇ ।
ಭದ್ರಾಯಾಶ್ಚೈವ ಕಾರ್ತ್ಸ್ನ್ಯೇನ ಪೃಚ್ಛಾಮಸ್ತ್ವಾಂ ಮಹಾಮುನೇ ॥ ೫ ॥

ಕಿಮರ್ಥಂ ತೌ ಸಮುತ್ಪನ್ನೌ ಕೃಷ್ಣಸಂಕರ್ಷಣಾವುಭೌ ।
ವಸುದೇವಸುತೌ ವೀರೌ ಸ್ಥಿತೌ ನಂದಗೃಹೇ ಮುನೇ ॥ ೬ ॥

ನಿಃಸಾರೇ ಮೃತ್ಯುಲೋಕೇಽಸ್ಮಿನ್ದುಃಖಪ್ರಾಯೇಽತಿಚಂಚಲೇ ।
ಜಲಬುದ್ಬುದಸಂಕಾಶೇ ಭೈರವೇ ಲೋಮಹರ್ಷಣೇ ॥ ೭ ॥

---

೩. ಎಲೈ ವಾಗ್ಮಿಯೇ, ಪುರುಷೋತ್ತಮ ಕ್ಷೇತ್ರದ ಮಾಹಾತ್ಮೆಯನ್ನು ಕೇಳಿ ನಮಗೊಬ್ಬರಿಗೆ ಮಾತ್ರವೇ ಅಲ್ಲದೆ ಎಲ್ಲರಿಗೂ ಆಶ್ಚರ್ಯವಾಗಿರುವುದು ಮತ್ತು ಅದರಲ್ಲಿ ಎಲ್ಲರಿಗೂ ಪ್ರೀತಿಯುಂಟಾಗಿರುವುದು.

೪. ಬಹಳ ಕಾಲದಿಂದಲೂ ನಮಗೆ ಒಂದು ಸಂಶಯವಿರುವುದು. ಆ ಸಂಶಯವನ್ನು ನಿವಾರಿಸಲು ನಿನ್ನನ್ನು ಬಿಟ್ಟರೆ ಮತ್ತಾರೂ ಇಲ್ಲವು.

೫. ಬಲರಾಮನು ಮತ್ತು ಕೃಷ್ಣನು ಈ ಭೂಮಿಯಲ್ಲಿ ಏತಕ್ಕೋಸ್ಕರ ಹುಟ್ಟಿದರು? ಸುಭದ್ರೆಯೂ ಸಹ ಹುಟ್ಟಿದುದಕ್ಕೆ ಕಾರಣವೇನು? ಈ ವಿಷಯವನ್ನು ನಾವು ಕೇಳಬೇಕೆಂದಿರುವೆವು.

೬. ಎಲೈ ಮುನಿಯೇ, ವಸುದೇವನ ಮಕ್ಕಳಾದ ಆ ಕೃಷ್ಣ ಬಲರಾಮರಿಬ್ಬರೂ ಏತಕ್ಕೋಸ್ಕರವಾಗಿ ನಂದಗೋಕುಲದಲ್ಲಿ ಹುಟ್ಟಿದರು?

೭–೮. ಈ ಮೃತ್ಯುಲೋಕವು ನಿಸ್ಸಾರವಾದುದು. ದುಃಖವೇ ಬಹಳವಾಗಿರುವುದು. ಅತಿ ಚಂಚಲವಾಗಿರುವುದು. ನೀರಿನಮೇಲಿನ ಗುಳ್ಳೆಯಂತೆ ಕ್ಷಣಿಕವಾದುದು. ಅತಿಕಷ್ಟವೂ, ಸಂಕಟವೂ ಉಂಟಾಗುವುದು. ಭಯವೂ, ರೋಮಾಂ

ವಿಣ್ಮೂತ್ರಪಿಚ್ಛಿಲಂ ಕಷ್ಟಂ ಸಂಕಟಂ ದುಃಖದಾಯಕಂ ।
ಕಥಂ ಘೋರತರಂ ತೇಷಾಂ ಗರ್ಭವಾಸಮರೋಚತ ॥ ೮ ॥

ಯಾನಿ ಕರ್ಮಾಣಿ ಚಕ್ರುಸ್ತೇ ಸಮುತ್ಪನ್ನಾ ಮಹೀತಲೇ ।
ವಿಸ್ತರೇಣ ಮುನೇ ತಾನಿ ಬ್ರೂಹಿ ನೋ ವದತಾಂ ವರ ॥ ೯ ॥

ಸಮಗ್ರಂ ಚರಿತಂ ತೇಷಾಮದ್ಭುತಂ ಚಾತಿಮಾನುಷಂ ।
ಕಥಂ ಸ ಭಗವಾನ್ದೇವಃ ಸುರೇಶಃ ಸುರಸತ್ತಮಃ ॥ ೧೦ ॥

ವಸುದೇವಕುಲೇ ಧೀಮಾನ್ವಾಸುದೇವತ್ವಮಾಗತಃ ।
ಅಮರೈಶ್ಚಾವೃತಂ ಪುಣ್ಯಂ ಪುಣ್ಯಕೃದ್ಭಿರಲಂಕೃತಂ ॥ ೧೧ ॥

ದೇವಲೋಕಂ ಕಿಮುತ್ಸೃಜ್ಯ ಮರ್ತ್ಯಲೋಕ ಇಹಾಗತಃ ।
ದೇವಮಾನುಷಯೋರ್ನೇತಾ ದ್ಯೋರ್ಭುವಃ ಪ್ರಭವೋಽವ್ಯಯಃ ॥ ೧೨ ॥

---

ಚವೂ ಆಗುವುದು. ವಿಣ್ಮೂತ್ರಗಳಿಂದ ಅಸಹ್ಯಕರವಾಗಿರುವುದು. ಇಂತಹ ಮರ್ತ್ಯಲೋಕದಲ್ಲಿ ಆ ಬಲರಾಮ ಕೃಷ್ಣರು ಹೇಗೆ ಅವತಾರ ಮಾಡಿದರು? ಅವರು ಪರಮಾತ್ಮನ ಅವತಾರಿಗಳಲ್ಲವೇ?

೯. ಅವರಿಬ್ಬರೂ ಯಾವ ಯಾವ ಕೆಲಸಗಳನ್ನು ಮಾಡಿದರು? ಎಂಬ ವಿಷಯಗಳೆಲ್ಲವನ್ನೂ ವಿಸ್ತಾರವಾಗಿ ನಮಗೆ ತಿಳಿಸು.

೧೦. ಅವರ ಅದ್ಭುತ ಚರಿತ್ರೆಯನ್ನೂ ಅಮಾನುಷವಾದ ಕರ್ಮಗಳನ್ನೂ ಕೂಡ ತಿಳಿಸು. ದೇವತೆಗಳಿಗೆ ಒಡೆಯರೂ, ದೇವತಾಶ್ರೇಷ್ಠರೂ ಆದ ಅವರು ವಸುದೇವನ ಕುಲದಲ್ಲಿ ಹುಟ್ಟಿ ವಾಸುದೇವತ್ವವನ್ನು ಹೇಗೆ ಹೊಂದಿದರು?

೧೧. ಪುಣ್ಯಾತ್ಮರಾದ ದೇವತೆಗಳಿಂದ ಅಲಂಕೃತವಾದ ದೇವಲೋಕವನ್ನು ಬಿಟ್ಟು ವಾಸುದೇವನು ಮರ್ತ್ಯಲೋಕಕ್ಕೆ ಏತಕ್ಕೋಸ್ಕರ ಬಂದನು?

೧೨. ದೇವಮನುಷ್ಯರುಗಳಿಗೆ ಮುಂದಾಳೂ ದೇವಭೂಲೋಕಗಳ ಉತ್ಪತ್ತಿಗೆ ಕಾರಣನೂ, ನಾಶರಹಿತನೂ ಆದ ವಾಸುದೇವನು ತನ್ನ ದಿವ್ಯ ಶರೀರವು ಮನುಷ್ಯಯೋನಿಯಲ್ಲಿ ಹುಟ್ಟುವಂತೆ ಏತಕ್ಕೆ ಮಾಡಿಕೊಂಡನು?

ಕಿಮರ್ಥಂ ದಿವ್ಯಮಾತ್ಮಾನಂ ಮಾನುಷೇಷು ನ್ಯಯೋಜಯತ್ ।
ಯಶ್ಚಕ್ರಂ ವರ್ತಯತ್ಯೇಕೋ ಮಾನುಷಾಣಾಮನಾಮಯಂ ॥ ೧೩ ॥

ಸ ಮಾನುಷ್ಯೇ ಕಥಂ ಬುದ್ಧಿಂ ಚಕ್ರೇ ಚಕ್ರಗದಾಧರಃ ।
ಗೋಪಾಯನಂ ಯಃ ಕುರುತೇ ಜಗತಃ ಸಾರ್ವಭೌತಿಕಂ ॥ ೧೪ ॥

ಸ ಕಥಂ ಗಾಂ ಗತೋ ವಿಷ್ಣುರ್ಗೋಪತ್ವಮಕರೋತ್ಪ್ರಭುಃ ।
ಮಹಾಭೂತಾನಿ ಭೂತಾತ್ಮಾ ಯೋ ದಧಾರ ಚಕಾರ ಚ ॥ ೧೫ ॥

ಶ್ರೀಗರ್ಭಃ ಸ ಕಥಂ ಗರ್ಭೇ ಸ್ತ್ರಿಯಾ ಭೂಚರಯಾ ಧೃತಃ ।
ಯೇನ ಲೋಕಾನ್ಕ್ರಮೈರ್ಜಿತ್ವಾ ತ್ರಿಭಿರ್ವೈ ತ್ರಿದಶೇಪ್ಸಯಾ ॥ ೧೬ ॥

ಸ್ಥಾಪಿತಾ ಜಗತೋ ಮಾರ್ಗಾಸ್ತ್ರಿವರ್ಗಾಶ್ಚಾಭವಂಸ್ತ್ರಯಃ ।
ಯೋಽಂತಕಾಲೇ ಜಗತ್ಪೀತ್ವಾ ಕೃತ್ವಾ ತೋಯಮಯಂ ವಪುಃ ॥ ೧೭ ॥

---

೧೩. ಆ ದೇವದೇವನು ಇನ್ನೊಬ್ಬರ ಸಹಾಯವಿಲ್ಲದೆ ತಾನೇ ಸಮಸ್ತ ಮನುಷ್ಯರನ್ನು ರಕ್ಷಿಸಲು ಸಮರ್ಥನು. ಇಂತಹ ಆ ವಾಸುದೇವನು ಮನುಷ್ಯರಲ್ಲಿ ಏಕೆ ಜನ್ಮವೆತ್ತಿದನು?

೧೪. ಜಗತ್ತಿನಲ್ಲಿರುವ ಸರ್ವಪ್ರಾಣಿಗಳನ್ನೂ ಸಹ ರಕ್ಷಣೆಮಾಡುವ ವಾಸುದೇವನು ಹಸುಗಳನ್ನು ಮಾತ್ರ ರಕ್ಷಣೆಮಾಡುವ ಗೋಪತ್ವವನ್ನು ಹೇಗೆ ಹೊಂದಿದನು?

೧೫. ಭೂತಾತ್ಮನಾದ ಆ ಪರಮಾತ್ಮನು ತನ್ನ ಗರ್ಭದಲ್ಲಿ ಪಂಚ ಮಹಾಭೂತಗಳನ್ನೂ ಪ್ರಪಂಚದ ಪ್ರಾಣಿಗಳೆಲ್ಲವನ್ನೂ ಧರಿಸುವನು. ಅವನು ಮನುಜ ಹೆಂಗಸಿನ ಗರ್ಭದಲ್ಲಿ ಹೇಗೆ ಹುಟ್ಟಿದನು?

೧೬. ಆ ಪರಮಾತ್ಮನು ತನ್ನ ಮೂರು ಹೆಜ್ಜೆಗಳಿಂದ ತ್ರಿವಿಕ್ರಮಾವತಾರದಲ್ಲಿ ಮೂರು ಲೋಕಗಳನ್ನೂ ಜಯಿಸಿದನು. ಇದರಿಂದ ಜಗತ್ತಿನಲ್ಲಿ ತ್ರಿವರ್ಗ ರೂಪವಾದ ಮಾರ್ಗವನ್ನು ಸೃಷ್ಟಿಸಿದನು.

೧೭-೧೮. ಜಗತ್ಪ್ರಳಯಕಾಲದಲ್ಲಿ ಜಗತ್ತೆಲ್ಲವನ್ನೂ ತನ್ನಲ್ಲಿ ಐಕ್ಯ ಮಾಡಿಕೊಂಡು ಎಲ್ಲವೂ ಜಲಮಯವಾಗುವಂತೆ ಮಾಡುವನು. ದೃಶ್ಯಾದೃಶ್ಯಾತ್ಮಕ

ಲೋಕಮೇಕಾರ್ಣವಂ ಚಕ್ರೇ ದೃಶ್ಯಾದೃಶ್ಯೇನ ಚಾತ್ಮನಾ ।
ಯಃ ಪುರಾಣಃ ಪುರಾಣಾತ್ಮಾ ವಾರಾಹಂ ರೂಪಮಾಸ್ಥಿತಃ ॥ ೧೮ ॥

ವಿಷಾಣಾಗ್ರೇಣ ವಸುಧಾಮುಜ್ಜಹಾರಾರಿಸೂದನಃ ।
ಯಃ ಪುರಾ ಪುರುಹೂತಾರ್ಥೇ ತ್ರೈಲೋಕ್ಯಮಿದಮವ್ಯಯಂ ॥ ೧೯ ॥

ದದೌ ಜಿತ್ವಾ ವಸುಮತೀಂ ಸುರಾಣಾಂ ಸುರಸತ್ತಮಃ ।
ಯೇನ ಸೈಂಹವಪುಃ ಕೃತ್ವಾ ದ್ವಿಧಾ ಕೃತ್ವಾ ಚ ತತ್ಪುನಃ ॥ ೨೦ ॥

ಪೂರ್ವದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುರ್ಹತಃ ।
ಯಃ ಪುರಾ ಹ್ಯಲನೋ ಭೂತ್ವಾ ಔರ್ವಃ ಸಂವರ್ತಕೋ ವಿಭುಃ ॥ ೨೧ ॥

ಪಾತಾಲಸ್ಥೋಽರ್ಣವರಸಂ ಪಪೌ ತೋಯಮಯಂ ಹರಿಃ ।
ಸಹಸ್ರಚರಣಂ ಬ್ರಹ್ಮ ಸಹಸ್ರಾಂಶುಸಹಸ್ರದಂ ॥ ೨೨ ॥

---

ವಾದ ಸಮಸ್ತ ಪ್ರಪಂಚವೂ ಒಂದು ದೊಡ್ಡ ಸಮುದ್ರದಂತೆ ಮಾಡಿ ತಾನು ವರಾಹ ರೂಪವನ್ನು ಧರಿಸಿ ತನ್ನ ಕೋಡಿನ ತುದಿಯಿಂದ ಭೂಮಿಯನ್ನು ಉದ್ಧರಿಸಿದನು.

೧೯. ದೇವತಾಶ್ರೇಷ್ಠನಾದ ವಾಸುದೇವನು ಹಿಂದೆ ಇಂದ್ರನಿಗೋಸ್ಕರ ಮೂರು ಲೋಕವನ್ನೂ ಜಯಿಸಿ ದೇವತೆಗಳಿಗೆ ಕೊಟ್ಟನು.

೨೦. ಹಿಂದೆ ಸಿಂಹದ ಶರೀರವನ್ನು ಧರಿಸಿ ಆ ಶರೀರವನ್ನು ನರ ಸಿಂಹ ಇವೆರಡು ಸ್ವರೂಪವನ್ನು ಮಾಡಿಕೊಂಡು ಮಹಾಬಲಶಾಲಿಯಾದ ಹಿರಣ್ಯಕಶಿಪುವೆಂಬ ದೈತ್ಯನನ್ನು ಕೊಂದನು.

೨೧. ಆ ಹರಿಯು ಪೂರ್ವದಲ್ಲಿ ಬಡಬಾಗ್ನಿಯ ರೂಪವನ್ನು ಧರಿಸಿ ಸರ್ವವ್ಯಾಪಕನಾಗಿ ಪಾತಳದಲ್ಲಿರುವ ನೀರಿನ ಮಯವಾದ ಸಮುದ್ರಜಲವನ್ನು ಕುಡಿದನು.

೨೨, ಪ್ರತಿಯೊಂದು ಯುಗದಲ್ಲಿಯೂ ಆ ಹರಿಯು ಸಹಸ್ರಪಾದಗಳುಳ್ಳವನೂ, ಸಹಸ್ರಕಿರಣಗಳುಳ್ಳವನೂ, ಸಮಸ್ತ ಅಭೀಷ್ಟಗಳನ್ನು ನೆರವೇರಿಸುವವನೂ, ಸಹಸ್ರ ತಲೆಯುಳ್ಳವನೂ, ಆಗಿರುವನು ಎಂದು ಹೇಳುವರು.

ಸಹಸ್ರಶಿರಸಂ ದೇವಂ ಯಮಾಹುರ್ವೈ ಯುಗೇ ಯುಗೇ ।
ನಾಭ್ಯಾಂ ಪದ್ಮಂ ಸಮುದ್ಭೂತಂ ಯಸ್ಯ ಪೈತಾಮಹಂ ಗೃಹಂ ॥ ೨೩ ॥

ಏಕಾರ್ಣವೇ ನಾಗಲೋಕೇ ಸದ್ಧಿರಣ್ಮಯಪಂಕಜಂ ।
ಯೇನ ತೇ ನಿಹತಾ ದೈತ್ಯಾಃ ಸಂಗ್ರಾಮೇ ತಾರಕಾಮಯೇ ॥ ೨೪ ॥

ಯೇನ ದೇವಮಯಂ ಕೃತ್ವಾ ಸರ್ವಾಯುಧಧರಂ ವಪುಃ ।
ಗುಹಾಸಂಸ್ಥೇನ ಚೋತ್ಸಿಕ್ತಃ ಕಾಲನೇಮಿರ್ನಿಪಾತಿತಃ ॥ ೨೫ ॥

ಉತ್ತರಾಂತೇ ಸಮುದ್ರಸ್ಯ ಕ್ಷೀರೋದಸ್ಯಾಮೃತೋದಧೌ ।
ಯಃ ಶೇತೇ ಶಾಶ್ವತಂ ಯೋಗಮಾಸ್ಥಾಯ ತಿಮಿರಂ ಮಹತ್ ॥ ೨೬ ॥

ಸುರಾರಣೀ ಗರ್ಭಮಧತ್ತ ದಿವ್ಯಂ
ತಪಃಪ್ರಕರ್ಷಾದದಿತಿಃ ಪುರಾಣಂ ।
ಶಕ್ರಂ ಚ ಯೋ ದೈತ್ಯಗಣಾವರುದ್ಧಂ
ಗರ್ಭಾವಧಾನೇನ ಕೃತಂ ಚಕಾರ ॥ ೨೭ ॥

---

೨೩–೨೪. ವಿಷ್ಣುವಿನ ನಾಭಿಯಲ್ಲಿ ಪದ್ಮವು ಹುಟ್ಟಿತು. ಅದೇ ಬ್ರಹ್ಮನ ಮನೆಯಾಯಿತು. ಏಕ ಸಮುದ್ರವಾದ ನಾಗಲೋಕದಲ್ಲಿ ಆ ಪದ್ಮವು ಹಿರಣ್ಮಯವಾಯಿತು. ತಾರಕಾಸುರನೊಡನೆ ಯುದ್ಧವಾದಾಗ ದೈತ್ಯರನ್ನು ಕೊಂದವನು ಆ ಹರಿಯು.

೨೫. ದೇವಮಯವಾದ ಶರೀರವನ್ನು ಧರಿಸಿ ಸರ್ವಾಯುಧಗಳನ್ನೂ ಧರಿಸಿ ಗುಹೆಯಲ್ಲಿ ಅಡಗಿದ್ದ ಕಾಲನೇಮಿ ಎಂಬುವನನ್ನು ಕೊಂದನು.

೨೬. ಕ್ಷೀರಸಮುದ್ರದ ಉತ್ತರದ ಕೊನೆಯಲ್ಲಿ ವಿಷ್ಣುವು ಶಾಶ್ವತವಾದ ಯೋಗವನ್ನವಲಂಭಿಸಿ ಯೋಗನಿದ್ರೆಯಲ್ಲಿ ಮಲಗಿರುವನು.

೨೭. ಅದಿತಿಯು, ದೇವತೆಗಳಿಗೆ ಒಡೆಯನೂ, ಚಿರಂತನವೂ ಆದ ಗರ್ಭವನ್ನು ತಪೋಮಹಿಮೆಯಿಂದ ಧರಿಸಿ ಇಂದ್ರನನ್ನು ಪಡೆದಳು. ಆ ಇಂದ್ರನನ್ನು ನಾಶಮಾಡುವ ದೈತ್ಯನನ್ನು ಧರಿಸಿದ ದಿತಿಯ ಗರ್ಭವನ್ನು ನಾಶಮಾಡಿದನು.

ಪದಾನಿ ಯೋ ಯೋಗಮಯಾನಿ ಕೃತ್ವಾ
ಚಕಾರ ದೈತ್ಯಾನ್ಸಲಿಲೇಶಯಸ್ಥಾನ್ ।
ಕೃತ್ವಾ ಚ ದೇವಾಂಸ್ತ್ರಿದಶೇಶ್ವರಾಂಸ್ತು
ಚಕ್ರೇ ಸುರೇಶಂ ಪುರುಹೂತಮೇವ ॥ ೨೮ ॥

ಗಾರ್ಹಪತ್ಯೇನ ವಿಧಿನಾ ಅನ್ವಾಹಾರ್ಯೇಣ ಕರ್ಮಣಾ ।
ಅಗ್ನಿಮಾವಹನೀಯಂ ಚ ವೇದಂ ದೀಕ್ಷಾಂ ಸಮಿದ್ಧ್ರುವಂ ॥ ೨೯ ॥

ಪ್ರೋಕ್ಷಣೀಯಂ ಸ್ರುವಂ ಚೈವ ಆವಭೃಥ್ಯಂ ತಥೈವ ಚ ।
ಅವಾಕ್ಪಾಣಿಸ್ತು ಯಶ್ಚಕ್ರೇ ಹವ್ಯಭಾಗಭುಜಸ್ತಥಾ ॥ ೩೦ ॥

ಹವ್ಯಾದಾಂಶ್ಚ ಸುರಾಂಶ್ಚಕ್ರೇ ಕವ್ಯಾದಾಂಶ್ಚ ಪಿತ್ಯಾನಥ ।
ಭೋಗಾರ್ಥೇ ಯಜ್ಞವಿಧಿನಾಯೋಜಯದ್ಯಜ್ಞಕರ್ಮಣಿ ॥ ೩೧ ॥

---

೨೮. ಯೋಗಮಹಿಮೆಯಿಂದ ತನ್ನ ಮೂರನೆಯ ಪಾದವನ್ನು ಬೆಳಸಿ ದೇವೇಂದ್ರನ ಪದಚ್ಯುತಿಗೆ ಕಾರಣನಾದ ಬಲಿಯನ್ನು ಮೆಟ್ಟಿ ಜಲಮಯವಾದ ಪಾತಾಳಕ್ಕೆ ತುಳಿದನು. ಅನಂತರ ಇಂದ್ರನನ್ನೇ ದೇವತೆಗಳಿಗೆಲ್ಲಾ ಅಧಿಪತಿಯನ್ನಾಗಿ ಮಾಡಿದನು.

೨೯-೩೦. ಗಾರ್ಹಪತ್ಯ ವಿಧಿಯನ್ನನುಸರಿಸಿ ಅನ್ವಾಹಾರ್ಯವೆಂಬ ಕರ್ಮವನ್ನು ಮಾಡಿ ಆಹವನೀಯಾಗ್ನಿಯನ್ನೂ, ವೇದವನ್ನೂ, ದೀಕ್ಷೆಯನ್ನೂ ಪ್ರೋಕ್ಷಣೀಪಾತ್ರೆ, ಸ್ರುವ, ಅವಭೃಥ ಇವುಗಳನ್ನು ಹಸ್ತಪಾದಗಳಿರದಿದ್ದರೂ ನಿರ್ಮಿಸಿ ಯಜ್ಞದ ಹವ್ಯಭಾಗವನ್ನು ದೇವತೆಗಳು ಭಕ್ಷಿಸುವಂತೆ ಮಾಡಿದನು.

೩೧. ಯಜ್ಞಪಾತ್ರೆಗಳನ್ನೂ, ದಕ್ಷಿಣೆಯನ್ನೂ, ದೀಕ್ಷೆಯನ್ನೂ ಚರು, ಉಲೂಖಲ, ಯಜ್ಞಕಂಬ, ಸಮಿತ್ತು, ಸ್ರುವ, ಸೋಮ, ಪವಿತ್ರಗಳು, ಪರಿಧಿ ಇವುಗಳನ್ನೆಲ್ಲಾ ಯಜ್ಞಾರ್ಥವಾಗಿ ನಿರ್ಮಿಸಿದನು.

ಪಾತ್ರಾಣಿ ದಕ್ಷಿಣಾಂ ದೀಕ್ಷಾಂ ಚರೂಂಶ್ಚೋಲೂಖಲಾನಿ ಚ ।
ಯೂಪಂ ಸಮಿತ್ಸ್ರುವಂ ಸೋಮಂ ಪವಿತ್ರಾನ್ಪರಿಧೀನಪಿ ॥ ೩೨ ॥

ಯಜ್ಞಿಯಾನಿ ಚ ದ್ರವ್ಯಾಣಿ ಚಮಸಾಂಶ್ಚ ತಥಾಪರಾನ್ ।
ಸದಸ್ಯಾನ್ಯಜಮಾನಾಂಶ್ಚ ಮೇಧಾದೀಂಶ್ಚ ಕ್ರತೂತ್ತಮಾನ್ ॥ ೩೩ ॥

ವಿಬಭಾಜ ಪುರಾ ಯಸ್ತು ಪಾರಮೇಷ್ಠ್ಯೇನ ಕರ್ಮಣಾ ।
ಯುಗಾನುರೂಪಂ ಯಃ ಕೃತ್ವಾ ಲೋಕಾನನುಪರಾಕ್ರಮಾತ್ ॥ ೩೪ ॥

ಕ್ಷಣಾ ನಿಮೇಷಾಃ ಕಾಷ್ಠಾಶ್ಚ ಕಲಾಸ್ತ್ರೈಕಾಲ್ಯಮೇವ ಚ ।
ಮುಹೂರ್ತಾಸ್ತಿಥಯೋ ಮಾಸಾ ದಿನಂ ಸಂವತ್ಸರಸ್ತಥಾ ॥ ೩೫ ॥

---

೩೨. ದೇವತೆಗಳು ಹವಿರ್ಭಾಗವನ್ನು ಭಕ್ಷಿಸುವಂತೆಯೂ, ರಾಕ್ಷಸರು ಮಾಂಸವನ್ನು ಭಕ್ಷಿಸುವಂತೆಯೂ ಮಾಡಿ ಯಜ್ಞಮಾಡುವುದರಿಂದ ದೇವತೆಗಳಿಗೆ ಭೋಗವುಂಟಾಗುವುದಕ್ಕೋಸ್ಕರವಾಗಿ ಯಜ್ಞಕರ್ಮವನ್ನು ಸೃಷ್ಟಿಸಿದನು.

೩೩. ಯಜ್ಞಕ್ಕೆ ಬೇಕಾದ ದ್ರವ್ಯಗಳನ್ನೂ, ಚಮಸಗಳನ್ನೂ ಇನ್ನೂ ಯಜ್ಞಕ್ಕೆ ಬೇಕಾದ ಅನೇಕ ಸಾಮಾನುಗಳನ್ನೂ, ಯಜ್ಞದ ಸದಸ್ಯರುಗಳನ್ನೂ ಯಜಮಾನರನ್ನೂ ಮೇಧವೇ ಮೊದಲಾದುವುಗಳನ್ನೂ ಶ್ರೇಷ್ಠವಾದ ಯಜ್ಞಗಳನ್ನೂ ಸೃಷ್ಟಿಸಿದನು.

೩೪. ಅಸದೃಶವಾದ ತನ್ನ ಪರಾಕ್ರಮದಿಂದ ಲೋಕಗಳನ್ನು ಯುಗಗಳಿಗನುಸಾರವಾಗಿ ಮಾಡಿದನು.

೩೫. ಕಾಲವನ್ನು ಕ್ಷಣ, ನಿಮಿಷ, ಕಾಷ್ಠ ಎಂಬುದಾಗಿ ಮೂರು ಭಾಗವನ್ನಾಗಿ ವಿಭಾಗಿಸಿದನು. ಮತ್ತು ಮುಹೂರ್ತ, ತಿಥಿ, ಮಾಸ, ದಿನ, ಸಂವತ್ಸರ, ಋತು ಇವುಗಳೆಲ್ಲವನ್ನೂ ಕಾಲಯೋಗಕ್ಕನುಸಾರವಾಗಿ ನಿರ್ಮಿಸಿದನು. ಪ್ರತ್ಯಕ್ಷ ಅನುಮಾನ ಉಪಮಾನ ಎಂಬ ಮೂರು ಪ್ರಮಾಣಗಳನ್ನೂ ನಿರ್ಮಿಸಿದನು.

ಋತವಃ ಕಾಲಯೋಗಾಶ್ಚ ಪ್ರಮಾಣಂ ತ್ರಿವಿಧಂ ತ್ರಿಷು ।
ಆಯುಃಕ್ಷೇತ್ರಾಣ್ಯುಪಚಯೋ ಲಕ್ಷಣಂ ರೂಪಸೌಷ್ಠವಂ ॥ ೩೬ ॥

ತ್ರಯೋ ಲೋಕಾಸ್ತ್ರಯೋ ದೇವಾಸ್ತ್ರೈವಿದ್ಯಂ ಪಾವಕಾಸ್ತ್ರಯಃ ।
ತ್ರೈಕಾಲ್ಯಂ ತ್ರೀಣಿ ಕರ್ಮಾಣಿ ತ್ರಯೋ ವರ್ಣಾಸ್ತ್ರಯೋ ಗುಣಾಃ ॥ ೩೭ ॥

ಸೃಷ್ಟಾ ಲೋಕಾಃ ಪುರಾ ಸರ್ವೇ ಯೇನಾನಂತೇನ ಕರ್ಮಣಾ ।
ಸರ್ವಭೂತಗತಃ ಸ್ರಷ್ಟಾ ಸರ್ವಭೂತಗುಣಾತ್ಮಕಃ ॥ ೩೮ ॥

ನೃಣಾಮಿಂದ್ರಿಯಪೂರ್ವೇಣ ಯೋಗೇನ ರಮತೇ ಚ ಯಃ ।
ಗತಾಗತಾಭ್ಯಾಂ ಯೋಗೇನ ಯ ಏವ ವಿಧಿರೀಶ್ವರಃ ॥ ೩೯ ॥

---

೩೬-೩೭. ಆಯಸ್ಸು, ಕ್ಷೇತ್ರಗಳು, ಅಭಿವೃದ್ಧಿ ಲಕ್ಷಣ, ರೂಪ ಸೌಂದರ್ಯ ಇವುಗಳನ್ನು ನಿರ್ಮಿಸಿದನು. ಮೂರು ಲೋಕಗಳು, ಬ್ರಹ್ಮವಿಷ್ಣುಮಹೇಶ್ವರರೆಂಬ ಮೂರುಜನ ದೇವತೆಗಳು, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಅಗ್ನಿಗಳು ಇವುಗಳನ್ನೂ, ಪ್ರಾತಃಕಾಲ ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರುಕಾಲಗಳನ್ನೂ, ಮೂರು ಕರ್ಮಗಳನ್ನೂ, ಮೂರು ವರ್ಣಗಳನ್ನೂ ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳನ್ನೂ ಸೃಷ್ಟಿಸಿದನು.

೩೮. ಅಮಾನುಷವೂ, ಅಪಾರವೂ ಆದ ಕೆಲಸಗಳಿಂದ ಲೋಕಗಳನ್ನೆಲ್ಲಾ ಯಾವನು ಸೃಷ್ಟಿಸಿದನೋ ಆ ಪರಮಾತ್ಮನೇ ಎಲ್ಲಾ ಪ್ರಾಣಿಗಳಲ್ಲಿಯೂ ಇರುವವನು. ಸರ್ವಭೂತಗುಣಾತ್ಮಕನು.

೩೯. ಮನುಷ್ಯರು ತಮ್ಮ ಚಕ್ಷುರಾದಿ ಇಂಧ್ರಿಯಗಳ ಮೂಲಕ ಯಾವ ಸುಖವನ್ನನುಭವಿಸುವರೋ ಆ ಸುಖವನ್ನು ಯೋಗದಿಂದ ಪರಮಾತ್ಮನು ಅನುಭವಿಸುವನು. ಅವನೇ ವಿಧಿ ಎಂಬುವನು. ಈಶ್ವರನೆಂದೂ ಅವನಿಗೆ ಹೆಸರಿದೆ.

ಯೋ ಗತಿರ್ಧರ್ಮಯುಕ್ತಾನಾಮಗತಿಃ ಪಾಪಕರ್ಮಣಾಂ ।
ಚಾತುರ್ವರ್ಣ್ಯಸ್ಯ ಪ್ರಭವಶ್ಚಾತುರ್ವರ್ಣ್ಯಸ್ಯ ರಕ್ಷಿತಾ ॥ ೪೦ ॥

ಚಾತುರ್ವಿದ್ಯಸ್ಯ ಯೋ ವೇತ್ತಾ ಚಾತುರಾಶ್ರಮ್ಯಸಂಶ್ರಯಃ ।
ದಿಗಂತರಂ ನಭೋ ಭೂಮಿರ್ವಾಯುರ್ವಾಪಿ ವಿಭಾವಸುಃ ॥ ೪೧ ॥

ಚಂದ್ರಸೂರ್ಯಮಯಂ ಜ್ಯೋತಿರ್ಯುಗೇಶಃ ಕ್ಷಣದಾಚರಃ ।
ಯಃ ಪರಂ ಶ್ರೂಯತೇ ಜ್ಯೋತಿರ್ಯಃ ಪರಂ ಶ್ರೂಯತೇ ತಪಃ ॥ ೪೨ ॥

ಯಂ ಪರಂ ಪ್ರಾಹುರಪರಂ ಯಃ ಪರಃ ಪರಮಾತ್ಮವಾನ್ ।
ಆದಿತ್ಯಾನಾಂ ತು ಯೋ ದೇವೋ ಯಶ್ಚ ದೈತ್ಯಾಂತಕೋ ವಿಭುಃ ॥ ೪೩ ॥

---

೪೦. ಆ ಪರಮಪುರುಷನು ಧರ್ಮವನ್ನು ತಿಳಿದವರಿಗೆ ಉತ್ತಮವಾದ ಗತಿಯನ್ನೂ ಪಾಪಿಗಳಿಗೆ ನರಕವನ್ನೂ ಕೊಡುವನು. ಅವನಿಂದಲೇ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರು ಹುಟ್ಟಿದರು. ಇವರುಗಳ ರಕ್ಷಣೆಯೂ ಸಹ ಅವನಿಗೆ ಸೇರಿದುದು.

೪೧. ನಾಲ್ಕು ವಿದ್ಯೆಗಳ ಜ್ಞಾನಿಯವನು. ಬ್ರಹ್ಮಚಾರಿ, ಗಾರ್ಹಸ್ಥ ವಾನಪ್ರಸ್ಥ, ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳಿಗೆ ಆಶ್ರಯನು. ದಿಗಂತ ಅಂತರಿಕ್ಷ, ಭೂಮಿ, ವಾಯು, ಅಗ್ನಿ ಇವಲ್ಲವುಗಳ ಸೃಷ್ಟಿಯನ್ನು ಮಾಡಿದವನು ಆ ಪರಮಾತ್ಮನು.

೪೨. ಚಂದ್ರಸೂರ್ಯಮಯನೂ, ಜ್ಯೋತಿರ್ಮಯನೂ, ಯುಗಗಳಿಗೆಲ್ಲಾ ಅಧಿಪತಿಯೂ ರಾತ್ರಿಯಲ್ಲಿ ಸಂಚರಿಸುವವನೂ ಸಹ ಆ ಹರಿಯು. ಎಲ್ಲದಕ್ಕಿಂತಲೂ ಶ್ರೇಷ್ಠವಾದ ಜ್ಯೋತಿ ಎನ್ನುವುದೂ, ಶ್ರೇಷ್ಠವಾದ ತಪಸ್ಸೆನ್ನುವುದೂ, ಎಲ್ಲರಿಗಿಂತಲೂ ಶ್ರೇಷ್ಠನೆನ್ನುವುದೂ ಆ ಪರಮಾತ್ಮನನ್ನೇ.

೪೩. ದ್ವಾದಶಾದಿತ್ಯರುಗಳಿಗೆ ಅಧಿಪತಿಯೂ, ದೈತ್ಯರುಗಳಿಗೆ ನಾಶಕಾರಿಯೂ, ವ್ಯಾಪಕನೂ ಆ ಹರಿಯು. ಅವನೇ ಯುಗಾಂತ್ಯದಲ್ಲಿ ಅಂತಕಸ್ವರೂಪನು. ಲೋಕಗಳಿಗೆ ಯಾರು ಅಂತಕನೋ ಅವನಿಗೂ ಸಹ ಅಂತಕಸ್ವರೂಪನು.

ಯುಗಾಂತೇಷ್ವಂತಕೋ ಯಶ್ಚ ಯಶ್ಚ ಲೋಕಾಂತಕಾಂತಕಃ ।
ಸೇತುರ್ಯೋ ಲೋಕಸೇತೂನಾಂ ಮೇಧ್ಯೋ ಯೋ ಮೇಧ್ಯಕರ್ಮಣಾಂ ॥

ವೇದ್ಯೋ ಯೋ ವೇದವಿದುಷಾಂ ಪ್ರಭುರ್ಯಃ ಪ್ರಭವಾತ್ಮನಾಂ ।
ಸೋಮಭೂತಶ್ಚ ಸೌಮ್ಯಾನಾಮಗ್ನಿಭೂತೋಽಗ್ನಿವರ್ಚಸಾಂ ॥ ೪೫ ॥

ಯಃ ಶಕ್ರಾಣಾಮೀಶಭೂತಸ್ತಪೋಭೂತಸ್ತಪಸ್ವಿನಾಂ ।
ವಿನಯೋ ನಯವೃತ್ತೀನಾಂ ತೇಜಸ್ತೇಜಸ್ವಿನಾಮಪಿ ॥ ೪೬ ॥

ವಿಗ್ರಹೋ ವಿಗ್ರಹಾರ್ಹಾಣಾಂ ಗತಿರ್ಗತಿಮತಾಮಪಿ ।
ಆಕಾಶಪ್ರಭವೋ ವಾಯುರ್ವಾಯೋಃ ಪ್ರಾಣಾದ್ಧುತಾಶನಃ ॥ ೪೭ ॥

ದಿವೋ ಹುತಾಶನಃ ಪ್ರಾಣಃ ಪ್ರಾಣೋಽಗ್ನಿರ್ಮಧುಸೂದನಃ
ರಸಾಚ್ಛೋಣಿತಸಂಭೂತಿಃ ಶೋಣಿತಾನ್ಮಾಂಸಮುಚ್ಯತೇ ॥ ೪೮ ॥

---

೪೪-೪೫, ಸಂಸಾರವೆಂಬ ಸಮುದ್ರಕ್ಕೆ ಸೇತುಸ್ವರೂಪನು. ಪವಿತ್ರವಾದ ಕರ್ಮಗಳಿಗೆಲ್ಲಾ ಪವಿತ್ರನು. ವೇದವನ್ನು ತಿಳಿದವರಲ್ಲೆಲಾ ಜ್ಞಾನಿಯು. ಪ್ರಭಾವಶಾಲಿಗಳಿಗೆಲ್ಲಾ ಪ್ರಭುವು. ಸೌಮ್ಯವಸ್ತುಗಳಲ್ಲೆಲ್ಲಾ ಚಂದ್ರನಂತೆ ಆಹ್ಲಾದಕರನು. ತೇಜಸ್ವಿಗಳಲ್ಲಿ ಅಗ್ನಿಸ್ವರೂಪನು.

೪೬. ಇಂದ್ರರುಗಳಿಗೆಲ್ಲಾ ಅಧಿಪತಿಯು. ತಪಸ್ವಿಗಳಿಗೆಲ್ಲಾ ತಪೋರೂಪನು. ನ್ಯಾಯಮಾರ್ಗಾನುಗಾಮಿಗಳಿಗೆಲ್ಲಾ ನ್ಯಾಯಸ್ವರೂಪನು. ತೇಜಸ್ವಿಗಳಿಗೆಲ್ಲಾ ತೇಜೋರೂಪನು.

೪೭. ಕಲಹವನ್ನಾಡುವವರಿಗೆ ಕಲಹಸ್ವರೂಪನು. ಉತ್ತಮವಾದ ಗತಿಯನ್ನು ಅಪೇಕ್ಷಿಸುವವರಿಗೆ ಉತ್ತಮಗತಿಸ್ವರೂಪನು. ಆಕಾಶದಿಂದ ವಾಯುವೂ, ವಾಯುವಿನ ಪ್ರಾಣದಿಂದ ಅಗ್ನಿಯೂ ಹುಟ್ಟುವುದು. ಆಕಾಶ, ಅಗ್ನಿ, ಪ್ರಾಣವಾಯು ಇವರೆಲ್ಲರೂ ಮಧುಸೂದನಸ್ವರೂಪರೇ.

೪೮-೪೯. ಆಹಾರವನ್ನು ತಿನ್ನುವುದರಿಂದ ರಕ್ತವುಂಟಾಗುವುದು. ರಕ್ತದಿಂದ ಮಾಂಸವೂ, ಮಾಂಸದಿಂದ ಮೇದಸ್ಸೂ, (ಕೊಬ್ಬು) ಮೇದಸ್ಸಿನಿಂದ

ಮಾಂಸಾತ್ತು ಮೇದಸೋ ಜನ್ಮ ಮೇದಸೋಽಸ್ಥಿ ನಿರುಚ್ಯತೇ ।
ಅಸ್ಥ್ನೋ ಮಜ್ಜಾ ಸಮಭವನ್ಮಜ್ಜಾತಃ ಶುಕ್ರಸಂಭವಃ ॥ ೪೯ ॥

ಶುಕ್ರಾದ್ಗರ್ಭಃ ಸಮಭವದ್ರಸಮೂಲೇನ ಕರ್ಮಣಾ ।
ತತ್ರಾಪಾಂ ಪ್ರಥಮೋ ಭಾಗಃ ಸ ಸೌಮ್ಯೋ ರಾಶಿರುಚ್ಯತೇ ॥ ೫೦ ॥

ಗರ್ಭೋಽಷ್ಮಸಂಭವೋ ಜ್ಞೇಯೋ ದ್ವಿತೀಯೋ ರಾಶಿರುಚ್ಯತೇ ।
ಶುಕ್ರಂ ಸೋಮಾತ್ಮಕಂ ವಿದ್ಯಾದಾರ್ತವಂ ಪಾವಕಾತ್ಮಕಂ ॥ ೫೧ ॥

ಭಾವಾ ರಸಾನುಗಾಶ್ಚೈಷಾಂ ಬೀಜೇ ಚ ಶಶಿಪಾವಕೌ ।
ಕಫವರ್ಗೇ ಭವೇಚ್ಛುಕ್ರಂ ಪಿತ್ತವರ್ಗೇ ಚ ಶೋಣಿತಂ ॥ ೫೨ ॥

ಕಫಸ್ಯ ಹೃದಯಂ ಸ್ಥಾನಂ ನಾಭ್ಯಾಂ ಪಿತ್ತಂ ಪ್ರತಿಷ್ಠಿತಂ ।
ದೇಹಸ್ಯ ಮಧ್ಯೇ ಹೃದಯಂ ಸ್ಥಾನಂ ತನ್ಮನಸಃ ಸ್ಮೃತಂ ॥ ೫೩ ॥

---

ಮೂಳೆಗಳೂ, ಮೂಳೆಯಿಂದ ಮಜ್ಜವೂ, ಮಜ್ಜದಿಂದ ವೀರ್ಯವೂ ಉಂಟಾಗುವುದು.

೫೦. ಆ ವೀರ್ಯದಿಂದ ಗರ್ಭವುಂಟಾಗುವುದು. ಇವೆಲ್ಲಕ್ಕೂ ರಸಪ್ರಧಾನವಾದ ರಕ್ತವೇ ಕಾರಣವು. ಗರ್ಭದಲ್ಲಿ ನೀರಿನ ಸಂಬಂಧವಾದುದು ಮೊದಲನೆಯ ಭಾಗವು. ಇದಕ್ಕೆ ಸೌಮ್ಯರಾಶಿ ಎಂದು ಹೆಸರು. ಆ ಗರ್ಭದಲ್ಲಿ ಅಗ್ನಿಸಂಬಂಧವಾದುದು ಎರಡನೆಯ ರಾಶಿಯು.

೫೧. ವೀರ್ಯವು ಚಂದ್ರಾತ್ಮಕವಾಗಿಯೂ ರಜಸ್ಸು ಅಗ್ನ್ಯಾತ್ಮಕವಾಗಿಯೂ ಇರುವುದು. ಇವುಗಳ ಭಾವನೆಗಳೆಲ್ಲವೂ ರಸಸಂಬಂಧವಾದುವು. ಬೀಜಗಳಲ್ಲಿ ಚಂದ್ರಾಗ್ನಿಗಳು ಇರುವರು.

೫೨-೫೩. ವೀರ್ಯವು ಕಫಸಂಬಂಧವಾದುದು. ರಕ್ತವು ಪಿತ್ತಸಂಬಂಧವಾದುದು. ಕಫವು ಹೃದಯುದಲ್ಲಿರುವುದು. ನಾಭಿಯಲ್ಲಿ ಪಿತ್ತವಿರುವುದು. ಹೃದಯವು ದೇಹದ ಮಧ್ಯಭಾಗದಲ್ಲಿರುವುದು. ಅಲ್ಲಿ ಮನಸ್ಸೂ ಸಹ ಇರುವುದು.

ನಾಭಿಕೋಷ್ಠಾಂತರಂ ಯತ್ತು ತತ್ರ ದೇವೋ ಹುತಾಶನಃ ।
ಮನಃ ಪ್ರಜಾಪತಿರ್ಜ್ಞೇಯಃ ಕಫಃ ಸೋಮೋ ವಿಭಾವ್ಯತೇ ॥ ೫೪ ॥

ಪಿತ್ತಮಗ್ನಿಃ ಸ್ಮೃತಂ ತ್ವೇವಮಗ್ನಿಸೋಮಾತ್ಮಕಂ ಜಗತ್ ।
ಏವಂ ಪ್ರವರ್ತಿತೇ ಗರ್ಭೇ ವರ್ಧಿತೇಽರ್ಬುದಸಂನಿಭೇ ॥ ೫೫ ॥

ವಾಯುಃ ಪ್ರವೇಶಂ ಸಂಚಕ್ರೇ ಸಂಗತಃ ಪರಮಾತ್ಮನಃ ।
ಸ ಪಂಚಧಾ ಶರೀರಸ್ಥೋ ಭಿದ್ಯತೇ ವರ್ತತೇ ಪುನಃ ॥ ೫೬ ॥

ಪ್ರಾಣಾಪಾನೌ ಸಮಾನಶ್ಚ ಉದಾನೋ ವ್ಯಾನ ಏವ ಚ ।
ಪ್ರಾಣೋಽಸ್ಯ ಪರಮಾತ್ಮಾನಂ ವರ್ಧಯನ್ಪರಿವರ್ತತೇ ॥ ೫೭ ॥

ಅಪಾನಃ ಪಶ್ಚಿಮಂ ಕಾಯಮುದಾನೋಽರ್ಧ್ವಂ ಶರೀರಿಣಃ ।
ವ್ಯಾನಸ್ತು ವ್ಯಾಪ್ಯತೇ ಯೇನ ಸಮಾನಃ ಸಂನಿವರ್ತತೇ ॥ ೫೮ ॥

---

೫೪. ನಾಭಿ ಮತ್ತು ಕೋಷ್ಠಗಳ ಮಧ್ಯಭಾಗದಲ್ಲಿ ಅಗ್ನಿಯಿರುವನು. ಮನಸ್ಸಿನ ದೇವತೆಯು ಪ್ರಜಾಪತಿಯು. ಕಫಕ್ಕೆ ಚಂದ್ರನು ದೇವತೆಯು.

೫೫. ಪಿತ್ತವು ಅಗ್ನ್ಯಾತ್ಮಕವು. ಈ ಪ್ರಪಂಚವೇ ಚಂದ್ರಾಗ್ನಿಗಳ ಸಂಬಂಧವುಳ್ಳದ್ದು. ಈರೀತಿಯಾಗಿ ಸಾವಿರಾರು ಗರ್ಭಗಳು ಆಗುತ್ತಿರಲು ಆ ಗರ್ಭಗಳಲ್ಲಿ ಪರಮಾತ್ಮನ ಸಹವಾಸದಿಂದ ವಾಯುವು ಸಂಚಾರಮಾಡ ತೊಡಗುವನು.

೫೬-೫೭. ವಾಯುವು ಐದು ಬಗೆಯಾಗಿದೆ. ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನಗಳೆಂದು. ಪ್ರಾಣವಾಯುವು ಪರಮಾತ್ಮನಸುತ್ತಲೂ ಆವರಿಸಿಕೊಂಡಿರುವುದು.

೫೮. ಅಪಾನವಾಯುವು ಶರೀರದ ಪಶ್ಚಿಮಭಾಗದಲ್ಲಿ ಸಂಚರಿಸುತ್ತದೆ. ಉದಾನವಾಯುವು ಶರೀರದ ಅರ್ಧಭಾಗದಲ್ಲಿ ಸಂಚರಿಸುತ್ತದೆ. ವ್ಯಾನವಾಯುವು ಶರೀರವನ್ನೆಲ್ಲಾ ವ್ಯಾಪಿಸಿಕೊಂಡು ಸಂಚರಿಸುತ್ತದೆ. ಸಮಾನವಾಯುವು ಕಂಠಪ್ರದೇಶದಲ್ಲಿ ಸಂಚರಿಸುತ್ತದೆ.

ಭೂತಾವಾಪ್ತಿಸ್ತತಸ್ತಸ್ಯ ಜಾಯೇತೇಂದ್ರಿಯಗೋಚರಾ ।
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಂ ॥ ೫೯ ॥

ತಸ್ಯೇಂದ್ರಿಯನಿವಿಷ್ಟಾನಿ ಸ್ವಂ ಸ್ವಂ ಭಾಗಂ ಪ್ರಚಕ್ರಿರೇ ।
ಪಾರ್ಥಿವಂ ದೇಹಮಾಹುಸ್ತು ಪ್ರಾಣಾತ್ಮಾನಂ ಚ ಮಾರುತಂ ॥ ೬೦ ॥

ಛಿದ್ರಾಣ್ಯಾಕಾಶಯೋನೀನಿ ಜಲಾತ್ಸ್ರಾವಃ ಪ್ರವರ್ತತೇ ।
ಜ್ಯೋತಿಶ್ಚಕ್ಷೂಂಷಿ ತೇಜಶ್ಚ ಆತ್ಮಾ ತೇಷಾಂ ಮನಃ ಸ್ಮೃತಂ ॥ ೬೧ ॥

ಗ್ರಾಮಾಶ್ಚ ವಿಷಯಾಶ್ಚೈವ ಯಸ್ಯ ವೀರ್ಯಾತ್ಪ್ರವರ್ತಿತಾಃ ।
ಇತ್ಯೇತಾನ್ಪುರುಷಃ ಸರ್ವಾನ್ಸೃಜಂಲ್ಲೋಕಾನ್ಸನಾತನಃ ॥ ೬೨ ॥

ನೈಧನೇಽಸ್ಮಿನ್ಕಥಂ ಲೋಕೇ ನರತ್ವಂ ವಿಷ್ಣುರಾಗತಃ ।
ಏಷ ನಃ ಸಂಶಯೋ ಬ್ರಹ್ಮನ್ನೇಷ ನೋ ವಿಸ್ಮಯೋ ಮಹಾನ್ ॥ ೬೩ ॥

---

೫೯. ಅನಂತರ ಆ ಗರ್ಭವು ಪಂಚಭೂತಾತ್ಮಕವಾಗುವುದು. ಹಾಗೂ ಇಂದ್ರಿಯಗಳಿಗೆ ಗೋಚರಿಸುವುದು. ಪೃಥಿವೀ, ವಾಯು, ಆಕಾಶ, ನೀರು, ಅಗ್ನಿ ಇವೇ ಪಂಚಮಹಾಭೂತಗಳು.

೬೦. ಪಂಚಭೂತಗಳು ಇಂದ್ರಿಯಗಳಲ್ಲಿ ಪ್ರವೇಶಿಸಿ ತಮ್ಮತಮ್ಮ ಸ್ಥಾನಗಳನ್ನು ಅವಲಂಬಿಸಿಕೊಳ್ಳುವುವು. ಪಾರ್ಥಿವ ಭಾಗವು ಶರೀರವನ್ನೂ ವಾಯುವಿನ ಭಾಗವು ಪ್ರಾಣವನ್ನೂ ಸೇರುವುದು.

೬೧. ಆಕಾಶಯೋನಿಗಳಿಂದ ಛಿದ್ರಗಳೂ, ಜಲದಿಂದ ಸ್ರಾವ (ಸುರಿಯುವಿಕೆ) ವೂ, ಜ್ಯೋತಿಯಿಂದ ಚಕ್ಷುಸ್ಸುಗಳೂ, ತೇಜಸ್ಸೂ, ಉಂಟಾಗ.ವುವು. ಇವುಗಳಿಗೆಲ್ಲಾ ಮನಸ್ಸೇ ಆತ್ಮಸ್ವರೂಪವಾದುದು.

೬೨. ಗ್ರಾಮಗಳೂ, ದೇಶಗಳೂ, ಪರಮಾತ್ಮನ ವೀರ್ಯದಿಂದ ಹುಟ್ಟಿದವು. ಇವುಗಳನ್ನೆಲ್ಲಾ ಆ ಸನಾತನನಾದ ಪರಮಪುರುಷನು ಸೃಷ್ಟಿಸಿದನು.

೬೩. ಆದುದರಿಂದ ಈ ನಶ್ವರವಾದ ಲೋಕದಲ್ಲಿ ವಿಷ್ಣುವು ಮನುಷ್ಯನಾಗಿ ಹೇಗೆ ಹುಟ್ಟಿದನು ? ಇದೇ ನಮಗುಂಟಾಗಿರುವ ಸಂಶಯವು. ಹಾಗೂ ಇದು ಅತ್ಯಂತ ಆಶ್ಚರ್ಯಕರವೂ ಆಗಿರುವುದು.

**ಕಥಂ ಗತಿರ್ಗತಿಮತಾಮಾಪನ್ನೋ ಮಾನುಷೀಂ ತನುಂ ।**
**ಆಶ್ಚರ್ಯಂ ಪರಮಂ ವಿಷ್ಣುರ್ದೇವೈರ್ದೈತ್ಯೈಶ್ಚ ಕಥ್ಯತೇ ॥ ೭೪ ॥**

**ವಿಷ್ಣೋರುತ್ಪತ್ತಿಮಾಶ್ಚರ್ಯಂ ಕಥಯಸ್ವ ಮಹಾಮುನೇ ।**
**ಪ್ರಖ್ಯಾತಬಲವೀರ್ಯಸ್ಯ ವಿಷ್ಣೋರಮಿತತೇಜಸಃ ॥ ೭೫ ॥**

**ಕರ್ಮಣಾಶ್ಚರ್ಯಭೂತಸ್ಯ ವಿಷ್ಣೋಸ್ತತ್ತ್ವಮಿಹೋಚ್ಯತಾಂ ।**
**ಕಥಂ ಸ ದೇವೋ ದೇವಾನಾಮಾರ್ತಿಹಾ ಪುರುಷೋತ್ತಮಃ ॥ ೭೬ ॥**

**ಸರ್ವವ್ಯಾಪೀ ಜಗನ್ನಾಥಃ ಸರ್ವಲೋಕಮಹೇಶ್ವರಃ ।**
**ಸರ್ಗಸ್ಥಿಂತತ್ಯಕೃದ್ದೇವಃ ಸರ್ವಲೋಕಸುಖಾವಹಃ ॥ ೭೭ ॥**

**ಅಕ್ಷಯಃ ಶಾಶ್ವತೋಽನಂತಃ ಕ್ಷಯವೃದ್ಧಿವರ್ಜಿತಃ ।**
**ನಿರ್ಲೇಪೋ ನಿರ್ಗುಣಃ ಸೂಕ್ಷ್ಮೋ ನಿರ್ವಿಕಾರೋ ನಿರಂಜನಃ ॥ ೭೮ ॥**

---

೭೪. ಎಲೈ ಮಹಾಮುನಿಯೇ, ಮೋಕ್ಷೇಚ್ಛೆಯುಳ್ಳವರಿಗೆ ಮೋಕ್ಷವನ್ನು ಕೊಡತಕ್ಕ ಆ ವಿಷ್ಣುವು ಮನುಷ್ಯನಾಗಿ ಏಕೆ ಹುಟ್ಟಿದನು? ಇದು ಪರಮಾಶ್ಚರ್ಯಕರವಾದ ವಿಷಯವು. ದೇವತೆಗಳೂ, ದೈತ್ಯರೂ, ಸಹ ವಿಷ್ಣುವನ್ನು ಕೀರ್ತಿಸುವರು. ಅಂತಹ ವಿಷ್ಣುವಿನ ಪರಮಾಶ್ಚರ್ಯಕರವಾದ ಉತ್ಪತ್ತಿಯನ್ನು ನಮಗೆ ತಿಳಿಸು.

೭೫-೭೬. ಅತಿಬಲಶಾಲಿಯೂ, ಅತ್ಯಂತ ತೇಜಸ್ವಿಯೂ ಆದ ಪುರುಷೋತ್ತಮನು ಏಕೆ ಮನುಷ್ಯಜನ್ಮದಲ್ಲಿ ಅವತರಿಸಿದನು? ಅವನ ಕೆಲಸಗಳು ಬಹಳ ಅದ್ಭುತವಾದುವು. ದೇವತೆಗಳಿಗೆಲ್ಲಾ ದೇವನು. ಅವರ ದುಃಖವನ್ನು ದೂರಮಾಡುವವನು. ಇಂತಹ ವಿಷ್ಣುವಿನ ತತ್ವವನ್ನು ನಮಗೆ ತಿಳಿಸು.

೭೭-೭೮. ಜಗತ್ತಿಗೆ ಒಡೆಯನಾದ ವಿಷ್ಣುವು ಸರ್ವವ್ಯಾಪಿಯು. ಸರ್ವಲೋಕಾಧಿಪತಿಯು. ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಉಂಟುಮಾಡುವವನು. ಸರ್ವಲೋಕಗಳಿಗೂ ಸುಖವನ್ನುಂಟುಮಾಡುವವನು, ಅಕ್ಷಯನು ಶಾಶ್ವತನು, ಅಂತರಹಿತನು. ಕ್ಷಯವೃದ್ಧಿಗಳು ಆತನಿಗಿಲ್ಲವು. ಗುಣರಹಿತನು, ಸೂಕ್ಷ್ಮನು, ನಿರ್ವಿಕಾರನು, ನಿರಂಜನನು.

ಸರ್ವೋಪಾಧಿವಿನಿರ್ಮುಕ್ತಃ ಸತ್ತಾಮಾತ್ರವ್ಯವಸ್ಥಿತಃ ।
ಅವಿಕಾರೀ ವಿಭುರ್ನಿತ್ಯಃ ಪರಮಾತ್ಮಾ ಸನಾತನಃ ॥ ೬೯ ॥

ಅಚಲೋ ನಿರ್ಮಲೋ ವ್ಯಾಪೀ ನಿತ್ಯತೃಪ್ತೋ ನಿರಾಶ್ರಯಃ ।
ವಿಶುದ್ಧಂ ಶ್ರೂಯತೇ ಯಸ್ಯ ಹರಿತ್ವಂ ಚ ಕೃತೇ ಯುಗೇ ॥ ೭೦ ॥

ವೈಕುಂಠತ್ವಂ ಚ ದೇವೇಷು ಕೃಷ್ಣತ್ವಂ ಮಾನುಷೇಷು ಚ ।
ಈಶ್ವರಸ್ಯ ಹಿ ತಸ್ಯೇಮಾಂ ಗಹನಾಂ ಕರ್ಮಣೋ ಗತಿಂ ॥ ೭೧ ॥

ಸಮತೀತಾಂ ಭವಿಷ್ಯಂ ಚ ಶ್ರೋತುಮಿಚ್ಛಾ ಪ್ರವರ್ತತೇ ।
ಅವ್ಯಕ್ತೋ ವ್ಯಕ್ತಲಿಂಗಸ್ಥೋ ಯ ಏಷ ಭಗವಾನ್ಪ್ರಭುಃ ॥ ೭೨ ॥

ನಾರಾಯಣೋ ಹ್ಯನಂತಾತ್ಮಾ ಪ್ರಭವೋಽವ್ಯಯ ಏವ ಚ ।
ಏಷ ನಾರಾಯಣೋ ಭೂತ್ವಾ ಹರಿರಾಸೀತ್ಸನಾತನಃ ॥ ೭೩ ॥

---

೬೯-೭೦. ಅವನಿಗೆ ನಾಮರೂಪಗಳಾವುವೂ ಇಲ್ಲ. ಆ ವಿಷ್ಣುವು ಇರುವನು ಎಂಬ ವಾಕ್ಯದಿಂದ ಅವನ ಇರುವಿಕೆಯು ತಿಳಿಯುವುದು. ವಿಕಾರ ರಹಿತನು, ವ್ಯಾಪಕನು, ನಿತ್ಯನು. ಆ ಪರಮಾತ್ಮನು ಚಿರಂತನನೂ ಅಚಂಚಲ ರಹಿತನೂ, ನಿರ್ಮಲನೂ ಆಗಿರುವನು. ಅವನು ನಿತ್ಯತೃಪ್ತನು. ನಿರಾಶ್ರಯನು. ಕೃತಯುಗದಲ್ಲಿ ಸ್ಪಷ್ಟವಾಗಿ ವಿಷ್ಣುವೆಂದು ಅವನು ಕರೆಸಿಕೊಂಡನು.

೭೧. ದೇವತೆಗಳಲ್ಲಿ ವೈಕುಂಠನೆಂದೂ, ಮನುಷ್ಯರಲ್ಲಿ ಕೃಷ್ಣನೆಂದೂ ಅವನಿಗೆ ಹೆಸರುಗಳಿವೆ. ಆ ಪರಮೇಶ್ವರನ ಕರ್ಮಗತಿಯು ತಿಳಿಯಲು ಅಸಾಧ್ಯವಾದುದು. ಅಂತಹ ವಿಷ್ಣುವಿನ ಹಿಂದೆ ಕಳೆದುಹೋದ ಮುಂದೆ ಸಂಭವಿಸುವಂತಹ ಕೆಲಸಗಳನ್ನು ಕೇಳಬೇಕೆಂದು ಅಪೇಕ್ಷೆ ಹುಟ್ಟಿರುವುದು.

೭೨-೭೩. ಅಗೋಚರನಾದರೂ ನಾನಾವಿಧವಾದ ಚಿಹ್ನೆಗಳಿಂದ ಗೋಚರನೂ, ಅನಂತರೂಪಿಯೂ ನಾಶರಹಿತನೂ ಆದ ಭಗವಂತನು ನಾರಾಯಣನು. ಆ ಪ್ರಭುವೇ ನಾರಾಯಣನಾಗಿ ಚಿರಂತನನಾದ ಹರಿಯಾಗಿದ್ದನು.

ಬ್ರಹ್ಮಾ ಶಕ್ರಶ್ಚ ರುದ್ರಶ್ಚ ಧರ್ಮಃ ಶುಕ್ರೋ ಬೃಹಸ್ಪತಿಃ ।
ಪ್ರಧಾನಾತ್ಮಾ ಪುರಾ ಹ್ಯೇಷ ಬ್ರಹ್ಮಾಣಮಸೃಜತ್ಪ್ರಭುಃ ॥ ೭೪ ॥

ಸೋಽಸೃಜತ್ಪೂರ್ವಪುರುಷಃ ಪುರಾ ಕಲ್ಪೇ ಪ್ರಜಾಪತೀನ್ ।
ಏವಂ ಸ ಭಗವಾನ್ವಿಷ್ಣುಃ ಸರ್ವಲೋಕಮಹೇಶ್ವರಃ ।
ಕಿಮರ್ಥಂ ಮರ್ತ್ಯಲೋಕೇಽಸ್ಮಿನ್ಯಾತೋ ಯದುಕುಲೇ ಹರಿಃ ॥ ೭೫ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಸ್ವಯಂಭುಋಷಿಸಂವಾದೇ
ಋಷಿಪ್ರಶ್ನನಿರೂಪಣಂ ನಾಮೋನಾಶೀತ್ಯಧಿಕಶತತಮೋಽಧ್ಯಾಯಃ

---

೭೪. ಬ್ರಹ್ಮ, ಇಂದ್ರ, ರುದ್ರ, ಧರ್ಮ, ಶುಕ್ರ, ಗುರು ಇವರುಗಳೆಲ್ಲರಿಗಿಂತಲೂ ಪ್ರಧಾನಾತ್ಮನಾದ ಆ ಪರಮಾತ್ಮನೇ ಬ್ರಹ್ಮನನ್ನು ಸೃಷ್ಟಿಸಿದನು.

೭೫. ಪೂರ್ವಪುರುಷನಾದ ಆ ಪ್ರಭುವು ಪೂರ್ವಕಲ್ಪದಲ್ಲಿ ಬ್ರಹ್ಮರನ್ನು ಸೃಷ್ಟಿಸಿದನು. ಈ ರೀತಿಯಾಗಿ ಭಗವಂತನಾದ ವಿಷ್ಣುವು ಸರ್ವಲೋಕಕ್ಕೂ ಅಧಿಪತಿಯಾದನು. ಇಂತಹವನು ಈ ಮಾನವಲೋಕದಲ್ಲಿ ಯದುಕುಲದಲ್ಲಿ ಏತಕ್ಕೆ ಜನಿಸಿದನು? ಇದನ್ನು ನಮಗೆ ತಿಳಿಸು ಎಂದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಋಷಿಗಳ ಪ್ರಶ್ನನಿರೂಪಣವೆಂಬ
ನೂರೆಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಅಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ನಮಸ್ಕೃತ್ವಾ ಸುರೇಶಾಯ ವಿಷ್ಣವೇ ಪ್ರಭವಿಷ್ಣವೇ ।
ಪುರುಷಾಯ ಪುರಾಣಾಯ ಶಾಶ್ವತಾಯಾವ್ಯಯಾಯ ಚ ॥ ೧ ॥

ಚತುರ್ವ್ಯೂಹಾತ್ಮನೇ ತಸ್ಮೈ ನಿರ್ಗುಣಾಯ ಗುಣಾಯ ಚ ।
ವರಿಷ್ಠಾಯ ಗರಿಷ್ಠಾಯ ವರೇಣ್ಯಾಯಾಮಿತಾಯ ಚ ॥ ೨ ॥

ಯಜ್ಞಾಂಗಾಯಾಖಿಲಾಂಗಾಯ ದೇವಾದ್ಯೈರೀಪ್ಸಿತಾಯ ಚ ।
ಯಸ್ಮಾದಣುತರಂ ನಾಸ್ತಿ ಯಸ್ಮಾನ್ನಾಸ್ತಿ ಬೃಹತ್ತರಂ ॥ ೩ ॥

---

## ನೂರೆಂಭತ್ತನೆಯ ಅಧ್ಯಾಯವು

೧. ವ್ಯಾಸಮಹರ್ಷಿಯಿಂತೆಂದನು—ದೇವತೆಗಳಿಗೆ ಒಡೆಯನೂ, ಸರ್ವವ್ಯಾಪಕನೂ ಆದ ವಿಷ್ಣುವಿಗೆ ನಮಸ್ಕರಿಸುವೆನು. ಅವನು ಪುರಾಣಪುರುಷನು. ಶಾಶ್ವತನು, ನಾಶರಹಿತನು.

೨. ಚತುರ್ವ್ಯೂಹಾತ್ಮನೂ, ನಿರ್ಗುಣನಾದರೂ ಗುಣಸ್ವರೂಪನೂ ಆದ ವಿಷ್ಣುವಿಗ ನಮಸ್ಕರಿಸುವೆನು. ಅವನು ಶ್ರೇಷ್ಠನು. ಗೌರವಶಾಲಿಯು. ಪವಿತ್ರನು. ಆವನ ಸ್ವರೂಪವು ಇಷ್ಟೆಂದು ಎಣಿಸಲಾಗುವುದಿಲ್ಲ.

೩-೪. ಪರಮಾತ್ಮನಿಗಿಂತಲೂ ಸೂಕ್ಷ್ಮವಾದುದು ಮತ್ತೊಂದಿಲ್ಲ. ಹಾಗೆಯೇ ಅವನಿಗಿಂತಲೂ ದೊಡ್ಡದಾದುದೂ ಮತ್ತೊಂದಿಲ್ಲ. ಉತ್ಪತ್ತಿ

**ಯೇನ ವಿಶ್ವಮಿದಂ ವ್ಯಾಪ್ತಮಜೇನ ಸಚರಾಚರಂ ।**
**ಆವಿರ್ಭಾವತಿರೋಭಾವದೃಷ್ಟಾದೃಷ್ಟವಿಲಕ್ಷಣಂ ॥ ೪ ॥**

**ವದಂತಿ ಯತ್ಸೃಷ್ಟಮಿತಿ ತಥೈವಾಪ್ಯುಪಸಂಹೃತಂ ।**
**ಬ್ರಹ್ಮಣೇ ಚಾದಿದೇವಾಯ ನಮಸ್ಕೃತ್ಯ ಸಮಾಧಿನಾ ॥ ೫ ॥**

**ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ ।**
**ಸದೈಕರೂಪರೂಪಾಯ ಜಿಷ್ಣವೇ ವಿಷ್ಣವೇ ನಮಃ ॥ ೬ ॥**

**ನಮೋ ಹಿರಣ್ಯಗರ್ಭಾಯ ಹರಯೇ ಶಂಕರಾಯ ಚ ।**
**ವಾಸುದೇವಾಯ ತಾರಾಯ ಸರ್ಗಸ್ಥಿತ್ಯಂತಕಾರಿಣೇ ॥ ೭ ॥**

**ಏಕಾನೇಕಸ್ವರೂಪಾಯ ಸ್ಥೂಲಸೂಕ್ಷ್ಮಾತ್ಮನೇ ನಮಃ ।**
**ಅವ್ಯಕ್ತವ್ಯಕ್ತಭೂತಾಯ ವಿಷ್ಣವೇ ಮುಕ್ತಿಹೇತವೇ ॥ ೮ ॥**

---

ರಹಿತನಾದ ಅವನಿಂದ ಚರಾಚರಾತ್ಮಕವಾದ ಈ ಪ್ರಪಂಚವು ವ್ಯಾಪ್ತವಾಗಿರುವುದು ಮತ್ತು ಈ ದೃಶ್ಯಾದೃಶ್ಯಪ್ರಪಂಚವೆಲ್ಲವೂ ಅವನಿಂದಲೇ ಉತ್ಪತ್ತಿಯಾಗುವುದು, ಅವನಲ್ಲಿಯೇ ಲಯವನ್ನು ಹೊಂದುವುದು.

೫. ಈ ಪ್ರಪಂಚವು ಯಾವನಿಂದ ಸೃಷ್ಟಿಸಲ್ಪಟ್ಟಿತೆಂದು ಹೇಳುವರೋ ಮತ್ತು ಉದಾಹರಿಸುವರೋ ಅಂತಹ ಆದಿದೇವನೂ ಬ್ರಹ್ಮನೂ ಆದ ವಿಷ್ಣುವಿಗೆ ತಪಸ್ಸಮಾಧಿಯಿಂದ ನಮಸ್ಕರಿಸುವೆನು.

೬. ಯಾವವಿಧವಾದ ವಿಕಾರವೂ ಇಲ್ಲದಿರುವ, ಶುದ್ಧನೂ, ನಿತ್ಯನೂ, ಪರಮಾತ್ಮನೂ ಆದ ವಿಷ್ಣುವಿಗೆ ನಮಸ್ಕಾರವು. ಆ ಪರಮಾತ್ಮನು ಯಾವಾಗಲೂ ಏಕರೂಪನಾಗಿರುವನು. ಜಯಶಾಲಿಯು.

೭. ಹಿರಣ್ಯಗರ್ಭನೂ, ಮಂಗಳಪ್ರದನೂ, ವಸುದೇವಸುತನೂ ಆದ ಹರಿಗೆ ನಮಸ್ಕಾರವು. ಆ ಹರಿಯು ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು.

೮. ಏಕರೂಪನಾದರೂ ಅನೇಕರೂಪನಾಗಿರುವ, ಸ್ಥೂಲಾತ್ಮನಾದರೂ ಸೂಕ್ಷ್ಮಾತ್ಮನೂ ಆಗಿರುವ, ಅಗೋಚರನಾದರೂ ಧ್ಯಾನಗೋಚರನಾಗಿರುವ, ಮುಕ್ತಿಗೆ ಕಾರಣನಾದ ವಿಷ್ಣುವಿಗೆ ನಮಸ್ಕಾರವು.

**ಸರ್ಗಸ್ಥಿತಿವಿನಾಶಾನಾಂ ಜಗತೋ ಯೋ ಜಗನ್ಮಯಃ ।**
**ಮೂಲಭೂತೋ ನಮಸ್ತಸ್ಮೈ ವಿಷ್ಣವೇ ಪರಮಾತ್ಮನೇ ॥ ೯ ॥**

**ಆಧಾರಭೂತಂ ವಿಶ್ವಸ್ಯಾಪ್ಯಣೀಯಾಂಸಮಣೀಯಸಾಂ ।**
**ಪ್ರಣಮ್ಯ ಸರ್ವಭೂತಸ್ಥಮಚ್ಯುತಂ ಪುರುಷೋತ್ತಮಂ ॥ ೧೦ ॥**

**ಜ್ಞಾನಸ್ವರೂಪಮತ್ಯಂತಂ ನಿರ್ಮಲಂ ಪರಮಾರ್ಥತಃ ।**
**ತಮೇವಾರ್ಥಸ್ವರೂಪೇಣ ಭ್ರಾಂತಿದರ್ಶನತಃ ಸ್ಥಿತಂ ॥ ೧೧ ॥**

**ವಿಷ್ಣುಂ ಗ್ರಸಿಷ್ಣುಂ ವಿಶ್ವಸ್ಯ ಸ್ಥಿತಿಸರ್ಗೇ ತಥಾ ಪ್ರಭುಂ ।**
**ಅನಾದಿಂ ಜಗತಾಮೀಶಮಜಮಕ್ಷಯಮವ್ಯಯಂ ॥ ೧೨ ॥**

**ಕಥಯಾಮಿ ಯಥಾ ಪೂರ್ವಂ ಯಕ್ಷಾದ್ಯೈರ್ಮುನಿಸತ್ತಮೈಃ ।**
**ಪೃಷ್ಟಃ ಪ್ರೋವಾಚ ಭಗವಾನಬ್ಜಯೋನಿಃ ಪಿತಾಮಹಃ ॥ ೧೩ ॥**

---

೯. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನೂ, ಜಗತ್ಸ್ವರೂಪನೂ, ಜಗತ್ತಿಗೆ ಮೂಲಕಾರಣನೂ ಆದ ವಿಷ್ಣುವಿಗೆ ನಮಸ್ಕಾರವು.

೧೦. ಪ್ರಪಂಚಕ್ಕೆ ಆಧಾರಭೂತನೂ, ಸೂಕ್ಷ್ಮವಾದ ವಸ್ತುಗಳಿಗಿಂತಲೂ ಸೂಕ್ಷ್ಮನೂ ಎಲ್ಲಾ ಪ್ರಾಣಿಗಳಲ್ಲಿಯೂ ಇರುವವನೂ ಆದ ಪುರುಷೋತ್ತಮನಾದ ಅಚ್ಯುತನನ್ನು ನಮಸ್ಕರಿಸುವೆನು.

೧೧. ಪರಮಾರ್ಥದೃಷ್ಟಿಯಿಂದ ವಿಷ್ಣುವು ಜ್ಞಾನಸ್ವರೂಪನೂ, ಅತ್ಯಂತ ನಿರ್ಮಲನೂ ಆಗಿರುವನು. ಆ ವಿಷ್ಣುವೇ ಭ್ರಾಂತಿದೃಷ್ಟಿಯಿಂದ ಅರ್ಥಸ್ವರೂಪನಾಗಿರುವನು.

೧೨. ಪ್ರಪಂಚದ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣನಾದ ಪ್ರಭುವೇ ಆ ವಿಷ್ಣುವು. ಆದಿಪುರುಷನು. ಪ್ರಪಂಚಕ್ಕೆ ಒಡೆಯನು. ನಾಶರಹಿತನು. ಉತ್ಪತ್ತಿರಹಿತನು.

೧೩. ಹಿಂದೆ ಯಕ್ಷರೇ ಮೊದಲಾದವರೂ, ಮುನಿಶ್ರೇಷ್ಠರೂ ಬ್ರಹ್ಮನನ್ನು ಕುರಿತು ಇದೇ ವಿಷಯವನ್ನು ಕೇಳಿದರು. ಆಗ ಬ್ರಹ್ಮನು ಅವರುಗಳನ್ನು ಕುರಿತು ಹೇಳಿದ ವಿಷಯವನ್ನೇ ನಾನು ನಿಮಗೆ ಹೇಳುವೆನು.

ಋಕ್ಸಾಮಾನ್ಯುದ್ಗಿರನ್ವಕ್ತ್ರೈರ್ಯಃ ಪುನಾತಿ ಜಗತ್ತ್ರಯಂ ।
ಪ್ರಣಿಪತ್ಯ ತಥೇಶಾನಮೇಕಾರ್ಣವವಿನಿರ್ಗತಂ ॥ ೧೪ ॥

ಯಸ್ಯಾಸುರಗಣಾ ಯಜ್ಞಾನ್ವಿಲುಂಪಂತಿ ನ ಯಾಜಿನಾಂ ।
ಪ್ರವಕ್ಷ್ಯಾಮಿ ಮತಂ ಕೃತ್ಸ್ನಂ ಬ್ರಹ್ಮಣೋಽವ್ಯಕ್ತಜನ್ಮನಃ ॥ ೧೫ ॥

ಯೇನ ಸೃಷ್ಟಿಂ ಸಮುದ್ದಿಶ್ಯ ಧರ್ಮಾರ್ಥಾಃ ಪ್ರಕಟೀಕೃತಾಃ ।
ಆಪೋ ನಾರಾ ಇತಿ ಪ್ರೋಕ್ತಾ ಮುನಿಭಿಸ್ತತ್ತ್ವದರ್ಶಿಭಿಃ ॥ ೧೬ ॥

ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ।
ಸ ದೇವೋ ಭಗವಾನ್ಸರ್ವಂ ವ್ಯಾಪ್ಯ ನಾರಾಯಣೋ ವಿಭುಃ ॥ ೧೭ ॥

ಚತುರ್ಧಾ ಸಂಸ್ಥಿತೋ ಬ್ರಹ್ಮಾ ಸಗುಣೋ ನಿರ್ಗುಣಸ್ತಥಾ ।
ಏಕಾ ಮೂರ್ತಿರನುದ್ದೇಶ್ಯಾ ಶುಕ್ಲಾಂ ಪಶ್ಯಂತಿ ತಾಂ ಬುಧಾಃ ॥ ೧೮ ॥

---

೧೪. ಆ ಬ್ರಹ್ಮನು ತನ್ನ ನಾಲ್ಕು ಮುಖಗಳಿಂದ ಋಕ್ಸಾಮಾದಿ ವೇದಗಳನ್ನು ಪಠಿಸುತ್ತಾ ಮೂರು ಲೋಕಗಳನ್ನೂ ಪವಿತ್ರಗೊಳಿಸಿದನು. ಈಗ ನಾನು, ಎಲ್ಲವೂ ಜಲಮಯವಾಗಿರುವಾಗ ಅದರಲ್ಲಿ ಒಬ್ಬನೇ ಮಲಗಿರುವ ಆ ಪರಮಪುರಷನನ್ನು ನಮಸ್ಕರಿಸಿ ಹೇಳುವೆನು.

೧೫. ಆ ವಿಷ್ಣುವಿನ ಅನುಗ್ರಹದಿಂದ ರಾಕ್ಷಸರೂ ಸಹ ಯಜ್ಞಮಾಡುವವರ ಯಾಗಗಳನ್ನು ನಾಶಮಾಡಲಾರರು. ಅಂತಹ ಅಗೋಚರನೂ ಬ್ರಹ್ಮಸ್ವರೂಪನೂ ಆದ ನಾರಾಯಣನ ಚರಿತ್ರೆಯನ್ನು ಸಮಗ್ರವಾಗಿ ತಿಳಿಸುವೆನು.

೧೬–೧೭. ನಾರಾಯಣನ ಸೃಷ್ಟಿಯನ್ನನುಸರಿಸಿಯೇ ಧರ್ಮಾದಿಗಳು ಪ್ರಕಟವಾಗುವವು. ನೀರಿಗೆ ನಾರಾ ಎಂಬುದಾಗಿ ತತ್ವಜ್ಞಾನಿಗಳಾದ ಮುನಿಗಳು ಅರ್ಥವನ್ನು ಹೇಳುವರು. ಆ ನೀರೇ ಆಯನ ಅಂದರೆ ಸ್ಥಾನವಾಗಿ ಉಳ್ಳವನು. ಆದುದರಿಂದ ಆವನಿಗೆ ನಾರಾಯಣನೆಂದು ಹೆಸರಾಯಿತು. ಆ ಭಗವಂತನು ಸರ್ವಪ್ರಪಂಚವನ್ನೂ ವ್ಯಾಪಿಸಿಕೊಂಡು ಇರುವನು.

೧೮. ಸಗುಣನೂ, ನಿರ್ಗುಣನೂ ಬ್ರಹ್ಮಸ್ವರೂಪನೂ ಆದ ನಾರಾಯಣನು ನಾಲ್ಕು ವಿಭಾಗದಿಂದಿರುವನು. ಮೊದಲನೆಯ ಭಾಗವು ಒಂದು

ಜ್ವಾಲಾಮಾಲಾವನದ್ಧಾಂಗೀಂ ನಿಷ್ಠಾ ಸಾ ಯೋಗಿನಾಂ ಪುರಾ ।
ದೂರಸ್ಥಾ ಚಾಂತಿಕಸ್ಥಾ ಚ ವಿಜ್ಞೇಯಾ ಸಾ ಗುಣಾತಿಗಾ ॥ ೧೯ ॥

ವಾಸುದೇವಾಭಿಧಾನಾಸೌ ನಿರ್ಮಮತ್ವೇನ ದೃಶ್ಯತೇ ।
ರೂಪವರ್ಣಾದಯಸ್ತಸ್ಯಾ ನ ಭಾವಾಃ ಕಲ್ಪನಾಮಯಾಃ ॥ ೨೦ ॥

ಆಸ್ತೇ ಚ ಸಾ ಸದಾ ಶುದ್ಧಾ ಸುಪ್ರತಿಷ್ಠೈಕರೂಪಿಣೀ ।
ದ್ವಿತೀಯಾ ಪೃಥಿವೀಂ ಮೂರ್ಧ್ನಾ ಶೇಷಾಖ್ಯಾ ಧಾರಯತ್ಯಧಃ ॥ ೨೧ ॥

ತಾಮಸೀ ಸಾ ಸಮಾಖ್ಯಾತಾ ತಿರ್ಯಕ್ತ್ವಂ ಸಮುಪಾಗತಾ ।
ತೃತೀಯಾ ಕರ್ಮ ಕುರುತೇ ಪ್ರಜಾಪಾಲನತತ್ಪರಾ ॥ ೨೨ ॥

---

ಶುಕ್ಲವರ್ಣದ ಮೂರ್ತಿಯು. ಅದು ಪರಿಶುದ್ಧವಾಗಿರುವುದು. ಪಂಡಿತರೆಲ್ಲರೂ ಇದನ್ನು ವರ್ಣನಾತೀತವೆಂದು ಹೇಳುವರು.

೧೯. ಆ ಮೂರ್ತಿಯ ಅಂಗಾಂಗಗಳೆಲ್ಲವೂ ಜ್ವಾಲೆಯ ಸಮೂಹದಿಂದ ಕೂಡಿರುವುದು. ಅದು ದೂರದಲ್ಲಿಯೂ ಇರುವುದು ಹತ್ತಿರದಲ್ಲಿಯೂ ಇರುವುದು ಮತ್ತು ಗುಣಾತಿರಿಕ್ತವಾಗಿರುವುದು.

೨೦. ಆ ಮೂರ್ತಿಗೆ ವಾಸುದೇವನೆಂಬ ಹೆಸರಿರುವುದು. ಮಮಕಾರ ರಹಿತವಾದ ಮೂರ್ತಿಯದು. ಅದಕ್ಕೆ ರೂಪ, ವರ್ಣಾದಿಗಳಾವುವೂ ಇಲ್ಲ. ಅದರ ಭಾವನೆಯು ಕೇವಲ ಮನಸ್ಸಿನ ಕಲ್ಪನೆಯಿಂದ ತಿಳಿಯಲು ಸಾಧ್ಯವು. ಶುದ್ಧವಾಗಿಯೂ, ಏಕರೂಪವಾಗಿಯೂ, ಸ್ಥಿರವಾಗಿಯೂ ಇರುವುದು. ಇದು ವಿಷ್ಣುವಿನ ಮೊದಲನೆಯ ಭಾಗವು.

೨೧. ಎರಡನೆಯ ಭಾಗವು ಶೇಷನೆಂಬುದು. ಶೇಷನು ತನ್ನ ತಲೆಯಿಂದ ಪೃಥಿವಿಯನ್ನು ಧರಿಸಿರುವನು. ಆ ಭಾಗಕ್ಕೆ ತಾಮಸೀ ಎಂತಲೂ ಹೆಸರಿರುವುದು. ಅದು ತಿರ್ಯಗ್ಜಾತಿಗೆ ಸೇರಿದುದು.

೨೨. ಮೂರನೆಯ ಭಾಗವು ಸತ್ವಗುಣಪ್ರಧಾನವಾದುದು. ಅದು ಪ್ರಜೆಗಳನ್ನು ರಕ್ಷಿಸುವುದರಲ್ಲಿ ಆಸಕ್ತವಾಗಿರುವುದು. ಧರ್ಮವನ್ನು ಪ್ರಚಾರ ಮಾಡುವಂತಹುದು.

ಸತ್ತ್ವೋದ್ರಿಕ್ತಾ ತು ಸಾ ಜ್ಞೇಯಾ ಧರ್ಮಸಂಸ್ಥಾನಕಾರಿಣೀ ।
ಚತುರ್ಥೀ ಜಲಮಧ್ಯಸ್ಥಾ ಶೇತೇ ಪನ್ನಗತಲ್ಪಗಾ ॥ ೨೩ ॥

ರಜಸ್ತಸ್ಯಾ ಗುಣಃ ಸರ್ಗಂ ಸಾ ಕರೋತಿ ಸದೈವ ಹಿ ।
ಯಾ ತೃತೀಯಾ ಹರೇರ್ಮೂರ್ತಿಃ ಪ್ರಜಾಪಾಲನತತ್ಪರಾ ॥ ೨೪ ॥

ಸಾ ತು ಧರ್ಮವ್ಯವಸ್ಥಾನಂ ಕರೋತಿ ನಿಯತಂ ಭುವಿ ।
ಪ್ರೋದ್ಧತಾನಸುರಾನ್ಹಂತಿ ಧರ್ಮವ್ಯುಚ್ಛಿತ್ತಿಕಾರಿಣಃ ॥ ೨೫ ॥

ಪಾತಿ ದೇವಾನ್ಸಗಂಧರ್ವಾನ್ಧರ್ಮರಕ್ಷಾಪರಾಯಣಾನ್ ।
ಯದಾ ಯದಾ ಚ ಧರ್ಮಸ್ಯ ಗ್ಲಾನಿಃ ಸಮುಪಜಾಯತೇ ॥ ೨೬ ॥

ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜತ್ಯಸೌ ।
ಭೂತ್ವಾ ಪುರಾ ವರಾಹೇಣ ತುಂಡೇನಾಪೋ ನಿರಸ್ಯ ಚ ॥ ೨೭ ॥

---

೨೩. ನಾಲ್ಕನೆಯ ಭಾಗವು ರಜೋಗುಣಪ್ರಧಾನವಾದುದು. ಅದು ಜಲಮಧ್ಯದಲ್ಲಿ ಶೇಷನನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿರುವುದು. ಆ ಮೂರ್ತಿಯು ಯಾವಾಗಲೂ ಸೃಷ್ಟಿಯನ್ನು ಮಾಡುವುದು.

೨೪. ಪ್ರಜಾಪಾಲನೆಯಲ್ಲಿ ನಿರತವಾದ ವಿಷ್ಣುವಿನ ಮೂರನೇ ಭಾಗದ ಮೂರ್ತಿಯು ಪ್ರಪಂಚದಲ್ಲಿ ನಿಯತವಾಗಿ ಧರ್ಮದ ವ್ಯವಸ್ಥೆಯನ್ನು ಮಾಡುವುದು.

೨೫-೨೬. ಆ ಮೂರ್ತಿಯು ಧರ್ಮವನ್ನು ನಾಶಮಾಡುವಂತಹ ಅಸುರರನ್ನೆಲ್ಲಾ ನಾಶಮಾಡುವುದು. ಧರ್ಮವನ್ನು ರಕ್ಷಿಸಿಕೊಂಡು ಬರುತ್ತಿರುವ ದೇವ, ಗಂಧರ್ವರೇ ಮೊದಲಾದವರನ್ನು ಕಾಪಾಡುವುದು. ಯಾವಾಗ ಧರ್ಮಕ್ಕೆ ನಾಶವುಂಟಾಗುವ ಸಮಯವು ಒದಗುವುದೋ ಆಗ ಆ ಧರ್ಮವನ್ನು ಉದ್ಧಾರಮಾಡಲು ಆ ಮೂರ್ತಿಯು ತನ್ನನ್ನು ಸೃಷ್ಟಿಸಿಕೊಳ್ಳುವುದು.

೨೭. ಹಿಂದೆ ವರಾಹಾವತಾರವನ್ನು ಧರಿಸಿ ತನ್ನ ಕೋರೆದಾಡೆಗಳಿಂದ ನೀರನ್ನೆಲ್ಲಾ ನಾಶಮಾಡಿ ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನು ಒಂದೇ ಒಂದು ದಾಡೆಯಿಂದ ಕನ್ನೈದಿಲೆ ಪುಷ್ಪದಂತೆ ಮೇಲಕ್ಕೆತ್ತಿ ಉದ್ಧಾರ ಮಾಡಿದನು.

**ಏಕಯಾ ದಂಷ್ಟ್ರಯೋತ್ಖಾತಾ ನಲಿನೀವ ವಸುಂಧರಾ ।**
**ಕೃತ್ವಾ ನೃಸಿಂಹರೂಪಂ ಚ ಹಿರಣ್ಯಕಶಿಪುರ್ಹತಃ ॥ ೨೮ ॥**

**ವಿಪ್ರಚಿತ್ತಿಮುಖಾಶ್ಚಾನ್ಯೇ ದಾನವಾ ವಿನಿಪಾತಿತಾಃ ।**
**ವಾಮನಂ ರೂಪಮಾಸ್ಥಾಯ ಬಲಿಂ ಸಂಯಮ್ಯ ಮಾಯಯಾ ॥ ೨೯ ॥**

**ತ್ರೈಲೋಕ್ಯಂ ಕ್ರಾಂತವಾನೇವ ವಿನಿರ್ಜಿತ್ಯ ದಿತೇಃ ಸುತಾನ್ ।**
**ಭೃಗೋರ್ವಂಶೇ ಸಮುತ್ಪನ್ನೋ ಜಾಮದಗ್ನ್ಯಃ ಪ್ರತಾಪವಾನ್ ॥ ೩೦ ॥**

**ಜಘಾನ ಕ್ಷತ್ರಿಯಾನ್ರಾಮಃ ಪಿತುರ್ವಧಮನುಸ್ಮರನ್ ।**
**ತಥಾತ್ರಿತನಯೋ ಭೂತ್ವಾ ದತ್ತಾತ್ರೇಯಃ ಪ್ರತಾಪವಾನ್ ॥ ೩೧ ॥**

**ಯೋಗಮಷ್ಟಾಂಗಮಾಚಖ್ಯಾವಲರ್ಕಾಯ ಮಹಾತ್ಮನೇ ।**
**ರಾಮೋ ದಾಶರಥಿರ್ಭೂತ್ವಾ ಸ ತು ದೇವಃ ಪ್ರತಾಪವಾನ್ ॥ ೩೨ ॥**

**ಜಘಾನ ರಾವಣಂ ಸಂಖ್ಯೇ ತ್ರೈಲೋಕ್ಯಸ್ಯ ಭಯಂಕರಂ ।**
**ಯದಾ ಚೈಕಾರ್ಣವೇ ಸುಪ್ತೋ ದೇವದೇವೋ ಜಗತ್ಪತಿಃ ॥ ೩೩ ॥**

---

೨೮. ನರಸಿಂಹ ರೂಪವನ್ನು ಧರಿಸಿ ಹಿರಣ್ಯಕಶಿಪುವನ್ನು ಕೊಂದನು. ಇದೇ ರೂಪದಲ್ಲಿಯೇ ವಿಪ್ರಚಿತ್ತಿಯೇ ಮೊದಲಾದ ದಾನವರನ್ನು ಕೊಂದನು.

೨೯. ವಾಮನಾವತಾರವನ್ನು ಧರಿಸಿ ಮಾಯೆಯಿಂದ ಬಲಿಯನ್ನು ಪಾತಾಳಕ್ಕೆ ತುಳಿದನು. ದಿತಿಪುತ್ರರಾದ ದೈತ್ಯರನ್ನು ಜಯಿಸಿ ಮೂರುಲೋಕವನ್ನೂ ಆಕ್ರಮಿಸಿದನು.

೩೦. ಭೃಗುವಂಶದಲ್ಲಿ ಜಮದಗ್ನಿಗೆ ಮಗನಾಗಿ ಪರಶುರಾಮನೆಂಬ ಹೆಸರಿನಿಂದ ಅವತರಿಸಿ ಕ್ಷತ್ರಿಯರನ್ನೆಲ್ಲಾ ಕೊಂದು ತಂದೆಯ ವಧೆಯ ಪ್ರತೀಕಾರವನ್ನೆಸಗಿದನು.

೩೧. ಅತ್ರಿಗೆ ಮಗನಾದ ದತ್ತಾತ್ರೇಯನೆಂಬ ಹೆಸರಿನಿಂದ ಅವತರಿಸಿ ಅಲರ್ಕನೆಂಬ ಋಷಿಗೆ ಅಷ್ಟಾಂಗಯೋಗವನ್ನು ಉಪದೇಶಿಸಿದನು.

೩೨. ದಶರಥನಿಗೆ ರಾಮನೆಂಬ ಹೆಸರಿನಿಂದ ಪುತ್ರನಾಗಿ ಹುಟ್ಟಿ ತ್ರಿಲೋಕಭಯಂಕರನಾದ ರಾವಣನನ್ನು ಯುದ್ಧದಲ್ಲಿ ಕೊಂದನು.

೩೩-೩೪. ಪ್ರಪಂಚವೆಲ್ಲವೂ ಪ್ರಳಯಕಾಲದಲ್ಲಿ ಒಂದೇ ಸಮುದ್ರವಾಗಿರುವಾಗ ಜಗತ್ಪತಿಯಾದ ವಿಷ್ಣುವು ಶೇಷಶಾಯಿಯಾಗಿ ಒಂದು ಸಾವಿರ

ಸಹಸ್ರಯುಗಪರ್ಯಂತಂ ನಾಗಪರ್ಯಂಕಗೋ ವಿಭುಃ ।
ಯೋಗನಿದ್ರಾಂ ಸಮಾಸ್ಥಾಯ ಸ್ವೇ ಮಹಿಮ್ನಿ ವ್ಯವಸ್ಥಿತಃ ॥ ೩೪ ॥

ತ್ರೈಲೋಕ್ಯಮುದರೇ ಕೃತ್ವಾ ಜಗತ್ಸ್ಥಾವರಜಂಗಮಂ ।
ಜನಲೋಕಗತೈಃ ಸಿದ್ಧೈಃ ಸ್ತೂಯಮಾನೋ ಮಹರ್ಷಿಭಿಃ ॥ ೩೫ ॥

ತಸ್ಯ ನಾಭೌ ಸಮುತ್ಪನ್ನಂ ಪದ್ಮಂ ದಿಕ್ಪತ್ರಮಂಡಿತಂ ।
ಮರುತ್ಕಿಂಜಲ್ಕಸಂಯುಕ್ತಂ ಗೃಹಂ ಪೈತಾಮಹಂ ವರಂ ॥ ೩೬ ॥

ಯತ್ರ ಬ್ರಹ್ಮಾ ಸಮುತ್ಪನ್ನೋ ದೇವದೇವಶ್ಚತುರ್ಮುಖಃ ।
ತದಾ ಕರ್ಣಮಲೋದ್ಭೂತೌ ದಾನವೌ ಮಧುಕೈಟಭೌ ॥ ೩೭ ॥

ಮಹಾಬಲೌ ಮಹಾವೀರ್ಯೌ ಬ್ರಹ್ಮಾಣಂ ಹಂತುಮುದ್ಯತೌ ।
ಜಘಾನ ತೌ ದುರಾಧರ್ಷೌ ಉತ್ಥಾಯ ಶಯನೋದಧೇಃ ॥ ೩೮ ॥

---

ಯುಗಗಳವರೆಗೂ ಯೋಗನಿದ್ರೆಯನ್ನು ಮಾಡುತ್ತಾ ತನ್ನ ಮಹಿಮಾತಿಶಯದಿಂದ ಇದ್ದನು.

೩೫. ಸ್ಥಾವರಜಂಗಮಾತ್ಮಕವಾದ ಮೂರುಲೋಕಗಳನ್ನೂ ತನ್ನ ಉದರದಲ್ಲಿ ಅಡಗಿಸಿಕೊಂಡಿರಲು ಜನೋಲೋಕದ ಸಿದ್ಧರೂ ಮಹರ್ಷಿಗಳೂ ಇವನನ್ನು ಸ್ತುತಿಸುವರು.

೩೬. ಆ ವಿಷ್ಣುವಿನ ನಾಭಿಯಲ್ಲಿ ಪದ್ಮವು ಹುಟ್ಟಿತು. ಅದಕ್ಕೆ ದಿಕ್ಕುಗಳೇ ದಳಗಳು. ಸಪ್ತಮರುತ್ತುಗಳೇ ಕೇಸರಗಳು. ಇಂತಹ ಪದ್ಮವು ಬ್ರಹ್ಮನಿಗೆ ಶ್ರೇಷ್ಠವಾದ ಮನೆಯಾಯಿತು.

೩೭-೩೮. ಆ ಕಮಲದಲ್ಲಿ ಬ್ರಹ್ಮನು ಹುಟ್ಟಿದ ಸಮಯದಲ್ಲಿಯೇ ವಿಷ್ಣುವಿನ ಕಿವಿಯ ಕೊಳೆಯಿಂದ ಮಧುಕೈಟಭರೆಂಬ ಮಹಾಬಲಶಾಲಿಗಳಾದ ರಾಕ್ಷಸರು ಹುಟ್ಟಿದರು. ಅನಂತರ ಅವರು ಬ್ರಹ್ಮನನ್ನು ಕೊಲ್ಲಲು ಹೊರಟರು. ಆಗ ಮಲಗಿದ್ದ ವಿಷ್ಣುವು ಸಮುದ್ರದಿಂದ ಎದ್ದು ಅವರಿಬ್ಬರನ್ನೂ ಕೊಂದನು.

ಏವಮಾದೀಂಸ್ತಥೈವಾನ್ಯಾನಸಂಖ್ಯಾತುಮಿಹೋತ್ಸಹೇ ।
ಅವತಾರೋ ಹ್ಯಜಸ್ಯೇಹ ಮಾಥುರಃ ಸಾಂಪ್ರತಸ್ತ್ವಯಂ ॥ ೩೯ ॥

ಇತಿ ಸಾ ಸಾತ್ತ್ವಿಕೀ ಮೂರ್ತಿರವತಾರಂ ಕರೋತಿ ಚ ।
ಪ್ರದ್ಯುಮ್ನೇತಿ ಸಮಾಖ್ಯಾತಾ ರಕ್ಷಾಕರ್ಮಣ್ಯವಸ್ಥಿತಾ ॥ ೪೦ ॥

ದೇವತ್ವೇಽಥ ಮನುಷ್ಯತ್ವೇ ತಿರ್ಯಗ್ಯೋನೌ ಚ ಸಂಸ್ಥಿತಾ ।
ಗೃಹ್ಣಾತಿ ತತ್ಸ್ವಭಾವಶ್ಚ ವಾಸುದೇವೇಚ್ಛಯಾ ಸದಾ ॥ ೪೧ ॥

ದದಾತ್ಯಭಿಮತಾನ್ಕಾಮಾನ್ಪೂಜಿತಾ ಸಾ ದ್ವಿಜೋತ್ತಮಾಃ ।
ಏವಂ ಮಯಾ ಸಮಾಖ್ಯಾತಃ ಕೃತಕೃತ್ಯೋಽಪಿ ಯಃ ಪ್ರಭುಃ ।
ಮಾನುಷತ್ವಂ ಗತೋ ವಿಷ್ಣುಃ ಶೃಣುಧ್ವಂ ಚೋತ್ತರಂ ಪುನಃ ॥ ೪೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವ್ಯಾಸಋಷಿಸಂವಾದೇ
ಚತುರ್ವ್ಯೂಹವರ್ಣನಂ ನಾಮಾಶೀತ್ಯಧಿಕಶತತಮೋಽಧ್ಯಾಯಃ

---

೩೯. ಇವೇ ಮೊದಲಾದ ಅಸಂಖ್ಯಾತವಾದ ಅವತಾರಗಳನ್ನು ಎತ್ತಿ ಈಗ ಆ ವಿಷ್ಣುವು ಮಥುರೆಯಲ್ಲಿ ಹುಟ್ಟಿರುವನು.

೪೦. ಈರೀತಿಯಾಗಿ ಸತ್ತ್ವಪ್ರಧಾನವಾದ ಆ ವಿಷ್ಣುವಿನ ಮೂರ್ತಿಯು ಅವತಾರವನ್ನು ಮಾಡುವುದು. ಪ್ರದ್ಯುಮ್ನನೆಂಬ ಅವತಾರಮಾಡಿ ಪ್ರಜೆಗಳ ರಕ್ಷಣೆಯಲ್ಲಿ ತತ್ಪರನಾಗಿರುವನು.

೪೧. ದೇವತೆಗಳಲ್ಲಿಯೂ, ಮನುಷ್ಯರಲ್ಲಿಯೂ ತಿರ್ಯಗ್ಯೋನಿಯಲ್ಲಿಯೂ ಸಹ ಅವತರಿಸಿ ಅಲ್ಲಲ್ಲಿಯ ಭಾವಗಳನ್ನು ಸ್ವೀಕರಿಸುವನು.

೪೨. ಆ ವಿಷ್ಣುವನ್ನು ಪೂಜಿಸಿದರೆ ಇಷ್ಟಾರ್ಥಗಳನ್ನೆಲ್ಲಾ ಕೊಡುವನು. ಎಲೈ ಋಷಿಗಳಿರಾ, ಈರೀತಿಯಾಗಿ ನಾನು ಆ ಪ್ರಭುವಿನ ಪ್ರಯೋಜನಕಾರಕವಾದ ಅವತಾರಗಳನ್ನು ತಿಳಿಸಿದೆನು. ಇನ್ನು ಅವನು ಮನುಷ್ಯರಲ್ಲಿ ಎತ್ತಿದ ಶ್ರೇಷ್ಠವಾದ ಜನ್ಮದ ವಿಷಯವನ್ನು ಹೇಳುವೆನು ಕೇಳಿರಿ.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದ ವ್ಯಾಸ ಮತ್ತು ಋಷಿಗಳ ಸಂವಾದದಲ್ಲಿ ಚತುರ್ವ್ಯೂಹವರ್ಣನವೆಂಬ ನೂರೆಂಭತ್ತನೆಯ ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಏಕಾಶೀತ್ಯಧಿಕಶತತಮೋಽಧ್ಯಾಯಃ

---

॥ ವ್ಯಾಸ ಉವಾಚ ॥

ಶೃಣುಧ್ವಂ ಮುನಿಶಾರ್ದೂಲಾಃ ಪ್ರವಕ್ಷ್ಯಾಮಿ ಸಮಾಸತಃ ।
ಅವತಾರಂ ಹರೇಶ್ಚಾತ್ರ ಭಾರಾವತರಣೇಚ್ಛಯಾ ॥ ೧ ॥

ಯದಾ ಯದಾ ತ್ವಧರ್ಮಸ್ಯ ವೃದ್ಧಿರ್ಭವತಿ ಭೋ ದ್ವಿಜಾಃ ।
ಧರ್ಮಶ್ಚ ಹ್ರಾಸಮಭ್ಯೇತಿ ತದಾ ದೇವೋ ಜನಾರ್ದನಃ ॥ ೨ ॥

ಅವತಾರಂ ಕರೋತ್ಯತ್ರ ದ್ವಿಧಾ ಕೃತ್ವಾತ್ಮನಸ್ತನುಂ ।
ಸಾಧೂನಾಂ ರಕ್ಷಣಾರ್ಥಾಯ ಧರ್ಮಸಂಸ್ಥಾಪನಾಯ ಚ ॥ ೩ ॥

---

### ನೂರೆಂಭತ್ತೊಂದನೆಯ ಅಧ್ಯಾಯವು

೧. ವ್ಯಾಸನಿಂತೆಂದನು—ಎಲೈ ಮುನಿವರರೇ, ಭೂಭಾರವನ್ನು ತಗ್ಗಿಸ ಲೋಸುಗವಾಗಿ ಹರಿಯು ಭೂಮಿಯಲ್ಲಿ ಅವತರಿಸಿದ ವಿಷಯವನ್ನು ಸಮಗ್ರ ವಾಗಿ ತಿಳಿಸುವೆನು ಕೇಳಿರಿ.

೨. ಭೂಲೋಕದಲ್ಲಿ ಯಾವಾಗ ಅಧರ್ಮವು ಜಾಸ್ತಿಯಾಗಿ ಧರ್ಮಕ್ಕೆ ತಿರಸ್ಕಾರವುಂಟಾಗುವುದೋ ಆಗ ದೇವದೇವನಾದ ಜನಾರ್ದನನು ತನ್ನ ಶರೀರ ವನ್ನು ಎರಡುಭಾಗವನ್ನಾಗಿ ಮಾಡಿಕೊಂಡು ಅವತರಿಸುವನು.

೩–೪. ಸತ್ಪುರುಷರನ್ನು ರಕ್ಷಿಸಿ ಧರ್ಮಸಂಸ್ಥಾಪನೆಯನ್ನು ಮಾಡು ವುದಕ್ಕೂ, ದುಷ್ಟರನ್ನೂ ದೇವತೆಗಳಿಗೆ ಶತ್ರುಗಳಾದವರನ್ನೂ ನಾಶಮಾಡಿ ಪ್ರಜೆ

ದುಷ್ಟಾನಾಂ ನಿಗ್ರಹಾರ್ಥಾಯ ಅನ್ಯೇಷಾಂ ಚ ಸುರದ್ವಿಷಾಂ ।
ಪ್ರಜಾನಾಂ ರಕ್ಷಣಾರ್ಥಾಯ ಜಾಯತೇಽಸೌ ಯುಗೇ ಯುಗೇ ॥ ೪ ॥

ಪುರಾ ಕಿಲ ಮಹೀ ವಿಪ್ರಾ ಭೂರಿಭಾರಾವಪೀಡಿತಾ ।
ಜಗಾಮ ಧರಣೀ ಮೇರೌ ಸಮಾಜೇ ತ್ರಿದಿವೌಕಸಾಂ ॥ ೫ ॥

ಸಬ್ರಹ್ಮಕಾನ್ಸುರಾನ್ಸರ್ವಾನ್ಪ್ರಣಿಪತ್ಯಾಥ ಮೇದಿನೀ ।
ಕಥಯಾಮಾಸ ತತ್ಸರ್ವಂ ಖೇದಾತ್ಕರುಣಭಾಷಿಣೀ ॥ ೬ ॥

॥ ಧರಣ್ಯುವಾಚ ॥

ಅಗ್ನಿಃ ಸುವರ್ಣಸ್ಯ ಗುರುರ್ಗವಾಂ ಸೂರ್ಯೋಽಪರೋ ಗುರುಃ ।
ಮಮಾಪ್ಯಖಿಲಲೋಕಾನಾಂ ವಂದ್ಯೋ ನಾರಾಯಣೋ ಗುರುಃ ॥ ೭ ॥

ತತ್ಸಾಂಪ್ರತಮಿಮೇ ದೈತ್ಯಾಃ ಕಾಲನೇಮಿಪುರೋಗಮಾಃ ।
ಮರ್ತ್ಯಲೋಕಂ ಸಮಾಗಮ್ಯ ಬಾಧಂತೇಽಹರ್ನಿಶಂ ಪ್ರಜಾಃ ॥ ೮ ॥

---

ಗಳನ್ನು ಪರಿಪಾಲಿಸುವುದಕ್ಕೂ ಸಹ ಪ್ರತಿಯೊಂದು ಯುಗಗಳಲ್ಲಿಯೂ ಅವತರಿಸುವನು.

೫. ಎಲೈ ಋಷಿಗಳಿರಾ, ಹಿಂದೆ 'ಅತ್ಯಂತ ಭಾರದಿಂದ ಪೀಡಿತಳಾದ ಭೂಮಿಯು ಭಾರವನ್ನು ತಡೆಯಲಾರದೆ ಮೇರುಪರ್ವತದಲ್ಲಿ ಸೇರಿದ್ದ ದೇವತೆಗಳ ಸಭೆಗೆ ಈ ವಿಷಯವನ್ನು ತಿಳಿಸಲು ಬಂದಳು.

೬. ಅಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳನ್ನು ನಮಸ್ಕರಿಸಿ ಪೃಥಿವಿಯು ಬಹಳ ದುಃಖದಿಂದ ಅವರನ್ನು ಕುರಿತು—

೭. ಸುವರ್ಣಕ್ಕೆ ಅಗ್ನಿಯು ಗುರುವು. ಕಿರಣಗಳಿಗೆಲ್ಲಾ ಸೂರ್ಯನು ಗುರುವು. ಇವರೆಲ್ಲರಿಗೂ ನನಗೂ ಮೂರುಲೋಕಕ್ಕೂ ಸಹ ನಾರಾಯಣನು ಗುರುವು.

೮-೯. ಕಾಲನೇಮಿಯೇ ಮೊದಲಾದ ದೈತ್ಯರೆಲ್ಲರೂ ಮರ್ತ್ಯಲೋಕದಲ್ಲಿ ಹುಟ್ಟಿ ಹಗಲು ರಾತ್ರಿಯೆನ್ನದೆ ಪ್ರಜೆಗಳನ್ನೆಲ್ಲಾ ಬಾಧಿಸುತ್ತಿದ್ದರು. ಆ

ಕಾಲನೇಮಿರ್ಹತೋ ಯೋಽಸೌ ವಿಷ್ಣುನಾ ಪ್ರಭವಿಷ್ಣುನಾ ।
ಉಗ್ರಸೇನಸುತಃ ಕಂಸಃ ಸಂಭೂತಃ ಸುಮಹಾಸುರಃ ॥ ೯ ॥

ಅರಿಷ್ಟೋ ಧೇನುಕಃ ಕೇಶೀ ಪ್ರಲಂಬೋ ನರಕಸ್ತಥಾ ।
ಸುಂದೋಽಸುರಸ್ತಥಾತ್ಯುಗ್ರೋ ಬಾಣಶ್ಚಾಪಿ ಬಲೇ ಸುತಃ ॥ ೧೦ ॥

ತಥಾನ್ಯೇ ಚ ಮಹಾವೀರ್ಯಾ ನೃಪಾಣಾಂ ಭವನೇಷು ಯೇ ।
ಸಮುತ್ಪನ್ನಾ ದುರಾತ್ಮಾನಸ್ತಾನ್ನ ಸಂಖ್ಯಾತುಮುತ್ಸಹೇ ॥ ೧೧ ॥

ಅಕ್ಷೌಹಿಣ್ಯೋ ಹಿ ಬಹುಲಾ ದಿವ್ಯಮೂರ್ತಿಧೃತಾಃ ಸುರಾಃ ।
ಮಹಾಬಲಾನಾಂ ದೃಪ್ತಾನಾಂ ದೈತ್ಯೇಂದ್ರಾಣಾಂ ಮಮೋಪರಿ ॥ ೧೨ ॥

ತದ್ಭೂರಿಭಾರಪೀಡಾರ್ತಾ ನ ಶಕ್ನೋಮ್ಯಮರೇಶ್ವರಾಃ ।
ವಿಭರ್ತುಮಾತ್ಮಾನಮಹಮಿತಿ ವಿಜ್ಞಾಪಯಾಮಿ ವಃ ॥ ೧೩ ॥

---

ಕಾಲನೇಮಿಯನ್ನು ವಿಷ್ಣುವು ಕೊಂದನು. ಆದರೆ ಈಗ ಉಗ್ರಸೇನನ ಮಗನಾದ ಕಂಸನೆಂಬ ಮಹಾಸುರನು ಹುಟ್ಟಿ ಪ್ರಜೆಗಳನ್ನು ಬಾಧಿಸುತ್ತಿರುವನು.

೧೦-೧೧. ಆ ಕಂಸಾಸುರನ ಮನೆಯಲ್ಲಿಯೇ ಇನ್ನೂ ಅನೇಕ ರಾಕ್ಷಸರಿರುವರು. ಅರಿಷ್ಟ, ಧೇನುಕ, ಕೇಶೀ, ಪ್ರಲಂಬ, ನರಕ, ಸುಂದ ಬಲಿಯ ಮಗನಾದ ಬಾಣ ಇವರೇ ಮೊದಲಾದ ಮಹಾಪರಾಕ್ರಮಿಗಳಾದ ರಾಕ್ಷಸರೂ ಇನ್ನೂ ಅನೇಕ ದುರಾತ್ಮರೂ ಹುಟ್ಟಿರುವರು. ಅವರನ್ನು ಹೇಳಲೂ ಸಹ ಆಗುವುದಿಲ್ಲ.

೧೨. ಮಹಾಬಲಶಾಲಿಗಳಾದ ಆ ರಾಕ್ಷಸರು ಮಧಾಂದರಾಗಿ ಅನೇಕ ಅಕ್ಷೌಹಿಣೀ ಸೈನ್ಯಗಳಿಂದ ಕೂಡಿ ವಿವಿಧವಾದ ಆಕಾರಗಳನ್ನು ಧರಿಸಿ ನನ್ನ ಮೇಲೆ ಬಿದ್ದು ನನ್ನನ್ನು ಪೀಡಿಸುತ್ತಿರುವರು.

೧೩. ಆದುದರಿಂದ ನಾನು ಅತ್ಯಂತ ಭಾರಪೀಡಿತಳಾಗಿರುವೆನು. ಇದರಿಂದ ನನಗೆ ಸ್ಥಿರವಾಗಿರಲು ಸಾಧ್ಯವಿಲ್ಲವಾಗಿದೆ. ಈ ವಿಷಯವನ್ನು ನಿಮ್ಮಲ್ಲಿ ತಿಳಿಸಿರುವೆನು.

ಕ್ರಿಯತಾಂ ತನ್ಮಹಾಭಾಗಾ ಮಮ ಭಾರಾವತಾರಣಂ ।
ಯಥಾ ರಸಾತಲಂ ನಾಹಂ ಗಚ್ಛೇಯಮತಿವಿಹ್ವಲಾ  ॥ ೧೪ ॥

॥ ವ್ಯಾಸ ಉವಾಚ ॥
ಇತ್ಯಾಕರ್ಣ್ಯ ಧರಾವಾಕ್ಯಮಶೇಷೈಸ್ತ್ರಿದಶೈಸ್ತತಃ ।
ಭುವೋ ಭಾರಾವತಾರಾರ್ಥಂ ಬ್ರಹ್ಮಾ ಪ್ರಾಹ ಚ ಚೋದಿತಃ  ॥ ೧೫ ॥

॥ ಬ್ರಹ್ಮೋವಾಚ ॥
ಯದಾಹ ವಸುಧಾ ಸರ್ವಂ ಸತ್ಯಮೇತದ್ದಿವೌಕಸಃ ।
ಅಹಂ ಭವೋ ಭವಂತಶ್ಚ ಸರ್ವಂ ನಾರಾಯಣಾತ್ಮಕಂ  ॥ ೧೬ ॥

ವಿಭೂತಯಸ್ತು ಯಾಸ್ತಸ್ಯ ತಾಸಾಮೇವ ಪರಸ್ಪರಂ ।
ಆಧಿಕ್ಯಂ ನ್ಯೂನತಾ ಬಾಧ್ಯಬಾಧಕತ್ವೇನ ವರ್ತತೇ  ॥ ೧೭ ॥

ತದಾಗಚ್ಛತ ಗಚ್ಛಾಮಃ ಕ್ಷೀರಾಬ್ಧೇಸ್ತಟಮುತ್ತಮಂ ।
ತತ್ರಾರಾಧ್ಯ ಹರಿಂ ತಸ್ಮೈ ಸರ್ವಂ ವಿಜ್ಞಾಪಯಾಮ ವೈ  ॥ ೧೮ ॥

---

೧೪. ಎಲೈ ಮಹಾನುಭಾವರೇ, ನನ್ನ ಭಾರವನ್ನು ಇಳಿಸಿರಿ. ನಾನು ಹೆದರಿ ಪಾತಾಳಕ್ಕೆ ಹೋಗದಂತೆ ಮಾಡಿರಿ ಎಂದಳು.

೧೫. ಭೂಮಿಯಾಡಿದ ಮಾತನ್ನು ಕೇಳಿ ಬ್ರಹ್ಮನು ಭೂಭಾರವನ್ನು ಇಳಿಸಲು ದೇವತೆಗಳನ್ನು ಕುರಿತು—

೧೬. ದೇವತೆಗಳಿರಾ, ಭೂಮಿಯು ಹೇಳಿದ ವಿಷಯವು ಸತ್ಯವಾದುದು. ಇದಕ್ಕೋಸ್ಕರ ನಾವೆಲ್ಲರೂ ಶ್ರೀಮನ್ನಾರಾಯಣನ ಹತ್ತಿರಕ್ಕೆ ಹೋಗಬೇಕು. ಏಕೆಂದರೆ ನಾನು, ಈಶ್ವರನು ನೀವೆಲ್ಲರೂ ಸಹ ನಾರಾಯಣನ ಅಂಶದವರು.

೧೭–೧೮. ಅವನ ಅಂಶಗಳಲ್ಲಿ ಕೆಲವು ಅಧಿಕವಾಗಿಯೂ ಕೆಲವು ಕಡಿಮೆಯಾಗಿಯೂ ಪರಸ್ಪರ ಬಾಧ್ಯಬಾಧಕಗಳಾಗಿರುವುವು. ಆದುದರಿಂದ ಈಗ ನಾವೆಲ್ಲರೂ ಕ್ಷೀರಸಮುದ್ರದ ಹತ್ತಿರಕ್ಕೆ ಹೋಗೋಣ. ಅಲ್ಲಿ ವಿಷ್ಣುವನ್ನು ಸ್ತುತಿಸಿ ಈ ವಿಷಯಗಳನ್ನೆಲ್ಲಾ ಅವನಲ್ಲಿ ವಿಜ್ಞಾಪಿಸಿಕೊಳ್ಳೋಣ, ನಡೆಯಿರಿ.

ಸರ್ವದೈವ ಜಗತ್ಯರ್ಥೇ ಸ ಸರ್ವಾತ್ಮಾ ಜಗನ್ಮಯಃ ।
ಸ್ವಲ್ಪಾಂಶೇನಾವತೀರ್ಯೋರ್ವ್ಯಾಂ ಧರ್ಮಸ್ಯ ಕರುತೇ ಸ್ಥಿತಿಂ ॥ ೧೯ ॥

॥ ವ್ಯಾಸ ಉವಾಚ ॥
ಇತ್ಯುಕ್ತ್ವಾ ಪ್ರಯಯೌ ತತ್ರ ಸಹ ದೇವೈಃ ಪಿತಾಮಹಃ ।
ಸಮಾಹಿತಮನಾ ಭೂತ್ವಾ ತುಷ್ಟಾವ ಗರುಡಧ್ವಜಂ ॥ ೨೦ ॥

॥ ಬ್ರಹ್ಮೋವಾಚ ॥
ನಮೋ ನಮಸ್ತೇಽಸ್ತು ಸಹಸ್ರಮೂರ್ತೇ
ಸಹಸ್ರಬಾಹೋ ಬಹುವಕ್ತ್ರಪಾದ ।
ನಮೋ ನಮಸ್ತೇ ಜಗತಃ ಪ್ರವೃತ್ತಿ-
ವಿನಾಶಸಂಸ್ಥಾನಪರಾಪ್ರಮೇಯ ॥ ೨೧ ॥

ಸೂಕ್ಷ್ಮಾತಿಸೂಕ್ಷ್ಮಂ ಚ ಬೃಹತ್ಪ್ರಮಾಣಂ
ಗರೀಯಸಾಮಪ್ಯತಿಗೌರವಾತ್ಮನ್ ।
ಪ್ರಧಾನಬುದ್ಧೀಂದ್ರಿಯವಾಕ್ಪ್ರಧಾನ-
ಮೂಲಾಪರಾತ್ಮನ್ಭಗವನ್ಪ್ರಸೀದ ॥ ೨೨ ॥

---

೧೯. ಆಗ ಸರ್ವಾತ್ಮನೂ, ಜಗನ್ಮಯನೂ ಆದ ವಿಷ್ಣುವು ಜಗತ್ಸಂರಕ್ಷಣೆಗೋಸ್ಕರವಾಗಿ ತನ್ನ ಸಂಕಲ್ಪಾತಿಶಯದಿಂದ ಭೂಮಿಯಲ್ಲಿ ಅವತರಿಸಿ ಧರ್ಮವನ್ನು ಸ್ಥಾಪನೆ ಮಾಡುವನು ಎಂದನು.

೨೦. ಈರೀತಿಯಾಗಿ ಬ್ರಹ್ಮನು ಹೇಳಿ ದೇವತೆಗಳೊಡನೆ ಆ ನಾರಾಯಣನ ಸಮೀಪಕ್ಕೆ ಹೋದನು. ಅಲ್ಲಿ ಒಂದೇ ಮನಸ್ಸಿನಿಂದ ಗರುಡಧ್ವಜನನ್ನು ಸ್ತೋತ್ರಮಾಡಿದನು.

೨೧. ಎಲೈ ಸಹಸ್ರರೂಪನಾದ ನಾರಾಯಣನೇ, ನಿನಗೆ ನಮಸ್ಕಾರವು. ಸಹಸ್ರಬಾಹುಗಳೂ, ಅನೇಕ ಮುಖಗಳೂ, ಪಾದಗಳೂ ಉಳ್ಳವನು ನೀನು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನೂ, ಅಪ್ರಮೇಯನೂ ಆದ ನಿನಗೆ ನಮಸ್ಕಾರವು.

೨೨. ಸೂಕ್ಷ್ಮವಾದ ವಸ್ತುಗಳಿಗಿಂತಲೂ ಸೂಕ್ಷ್ಮನು. ದೊಡ್ಡದಾದ ವಸ್ತುಗಳಿಗಿಂತಲೂ ದೊಡ್ಡವನು. ಬುದ್ಧಿ, ಇಂದ್ರಿಯ, ವಾಕ್ ಇವುಗಳಲ್ಲೆಲ್ಲಾ ಪ್ರಧಾನನು. ಪರಾತ್ಪರವಸ್ತುವಾದ ನೀನು ನಮಗೆ ಪ್ರಸನ್ನನಾಗು.

ಏಷಾ ಮಹೀ ದೇವ ಮಹೀಪ್ರಸೂತೈ-
ರ್ಮಹಾಸುರೈಃ ಪೀಡಿತಶೈಲಬಂಧಾ ।
ಪರಾಯಣಂ ತ್ವಾಂ ಜಗತಾಮುಪೈತಿ
ಭಾರಾವತಾರಾರ್ಥಮಪಾರಪಾರಂ ॥ ೨೩ ॥

ಏತೇ ವಯಂ ವೃತ್ರರಿಪುಸ್ತಥಾಯಂ
ನಾಸತ್ಯದಸ್ರೌ ವರುಣಸ್ತಥೈಷಃ ।
ಇಮೇ ಚ ರುದ್ರಾ ವಸವಃ ಸಸೂರ್ಯಾಃ
ಸಮೀರಣಾಗ್ನಿ ಪ್ರಮುಖಾಸ್ತಥಾನ್ಯೇ ॥ ೨೪ ॥

ಸುರಾಃ ಸಮಸ್ತಾಃ ಸುರನಾಥ ಕಾರ್ಯ-
ಮೇಭಿರ್ಮಯಾ ಯಚ್ಚ ತದೀಶ ಸರ್ವಂ ।
ಆಜ್ಞಾಪಯಾಜ್ಞಾಂ ಪ್ರತಿಪಾಲಯಂತ-
ಸ್ತವೈವ ತಿಷ್ಠಾಮ ಸದಾಸ್ತದೋಷಾಃ ॥ ೨೫ ॥

॥ ವ್ಯಾಸ ಉವಾಚ ॥

ಏವಂ ಸಂಸ್ತೂಯಮಾನಸ್ತು ಭಗವಾನ್ಪರಮೇಶ್ವರಃ ।
ಉಜ್ಜಹಾರಾತ್ಮನಃ ಕೇಶೌ ಸಿತಕೃಷ್ಣೌ ದ್ವಿಜೋತ್ತಮಾಃ ॥ ೨೬ ॥

---

೨೩. ಓ ದೇವ, ಈ ಭೂಮಿಯು ಭೂಲೋಕದಲ್ಲಿ ಜನಿಸಿರುವ ಮಹಾಸುರರಿಂದ ಅತ್ಯಂತಪೀಡಿತಳಾಗಿ ಜಗತ್ಪರಾಯಣನಾದ ನಿನ್ನನ್ನು ತನ್ನ ಭಾರವನ್ನು ಇಳಿಸೆಂದು ಶರಣುಹೊಂದಿರುವಳು.

೨೪–೨೫. ನಾನು, ಇಂದ್ರ, ಅಶ್ವಿನೀದೇವತೆಗಳು, ವರುಣ ಈ ಏಕಾದಶರುದ್ರರು, ಅಷ್ಟವಸುಗಳು, ದ್ವಾದಶಾದಿತ್ಯರು, ವಾಯು ಇವರೇ ಮೊದಲಾದ ದೇವತೆಗಳೆಲ್ಲರೂ ಸಿದ್ಧವಾಗಿರುವೆವು. ಈಗ ಆಜ್ಞೆಯನ್ನು ತಿಳಿಸು. ನಿನ್ನ ಆಜ್ಞೆಯನ್ನು ನೆರವೇರಿಸಿ ದೋಷರಹಿತರಾಗುವೆವು ಎಂದನು.

೨೬. ಈರೀಯಾಗಿ ದೇವತೆಗಳು ಸ್ತೋತ್ರಮಾಡುತ್ತಿರಲು ಭಗವಂತನಾದ ನಾರಾಯಣನು ತನ್ನ ಬಿಳಿ, ಮತ್ತು ಕಪ್ಪು ಕೂದಲುಗಳನ್ನು ಬೇರ್ಪಡಿಸಿ ಕೊಟ್ಟನು.

ಉವಾಚ ಚ ಸುರಾನೇತೌ ಮತ್ಕೇಶೌ ವಸುಧಾತಲೇ ।
ಅವತೀರ್ಯ ಭುವೋ ಭಾರಕ್ಲೇಶಹಾನಿಂ ಕರಿಷ್ಯತಃ ॥ ೨೭ ॥

ಸುರಾಶ್ಚ ಸಕಲಾಃ ಸ್ವಾಂಶೈರವತೀರ್ಯ ಮಹೀತಲೇ ।
ಕುರ್ವಂತು ಯುದ್ಧಮುನ್ಮತ್ತೈಃ ಪೂರ್ವೋತ್ಪನ್ನೈರ್ಮಹಾಸುರೈಃ ॥ ೨೮ ॥

ತತಃ ಕ್ಷಯಮಶೇಷಾಸ್ತೇ ದೈತೇಯಾ ಧರಣೀತಲೇ ।
ಪ್ರಯಾಸ್ಯಂತಿ ನ ಸಂದೇಹೋ ನಾನಾಯುಧವಿಚೂರ್ಣಿತಾಃ ॥ ೨೯ ॥

ವಸುದೇವಸ್ಯ ಯಾ ಪತ್ನೀ ದೇವಕೀ ದೇವತೋಪಮಾ ।
ತಸ್ಯಾ ಗರ್ಭೋಽಷ್ಟಮೋಽಯಂ ತು ಮತ್ಕೇಶೋ ಭವಿತಾ ಸುರಾಃ ॥ ೩೦ ॥

ಅವತೀರ್ಯ ಚ ತತ್ರಾಯಂ ಕಂಸಂ ಘಾತಯಿತಾ ಭುವಿ ।
ಕಾಲನೇಮಿಸಮುದ್ಭೂತಮಿತ್ಯುಕ್ತ್ವಾಂತರ್ದಧೇ ಹರಿಃ ॥ ೩೧ ॥

---

೨೭. ಮತ್ತು ದೇವತೆಗಳನ್ನು ಕುರಿತು ಈ ನನ್ನ ಎರಡು ಕೇಶಗಳೂ ಭೂಲೋಕದಲ್ಲಿ ಅವತರಿಸಿ ಭೂಮಿಯ ಕ್ಲೇಶವನ್ನು ಹೋಗಲಾಡಿಸುವುವು.

೨೮. ದೇವತೆಗಳೆಲ್ಲರೂ ತಮ್ಮತಮ್ಮ ಅಂಶಗಳಿಂದ ಭೂಮಿಯಲ್ಲಿ ಹುಟ್ಟಿರಿ. ಮತ್ತು ನಿಮಗಿಂತ ಮುಂದಾಗಿ ಹುಟ್ಟಿರುವ ಮದೋನ್ಮತ್ತರಾದ ಮಹಾಸುರರೊಡನೆ ಯುದ್ಧಮಾಡುತ್ತಿರಿ.

೨೯. ಆರೀತಿ ಯುದ್ಧಮಾಡಿದರೆ ದೈತ್ಯರೆಲ್ಲರೂ ನಾಶವಾಗುವರು. ನಿಮ್ಮ ವಿವಿಧಾಯುಧಗಳ ಏಟಿನಿಂದ ಚೂರುಚೂರಾಗುವರು. ಇದರಲ್ಲಿ ಸಂಶಯವಿಲ್ಲ.

೩೦. ವಸುದೇವನೆಂಬುವವನಿಗೆ ದೇವಸ್ತ್ರೀಯಂತಿರುವ ದೇವಕಿ ಎಂಬ ಪತ್ನಿ ಇರುವಳು. ಅವಳ ಎಂಟನೆಯ ಗರ್ಭದಲ್ಲಿ ಈ ನನ್ನ ಕೇಶವು ಹುಟ್ಟುವುದು.

೩೧. ಭೂಮಿಯಲ್ಲಿ ಹುಟ್ಟಿ ಕಾಲನೇಮಿಯ ಕುಲದಲ್ಲಿ ಹುಟ್ಟಿದ ಕಂಸನನ್ನು ನಾಶಮಾಡುವುದು ಎಂದು ಹೇಳಿ ಅಂತರ್ಧಾನನಾದನು.

**ಅದೃಶ್ಯಾಯ ತತಸ್ತೇಽಪಿ ಪ್ರಣಿಪತ್ಯ ಮಹಾತ್ಮನೇ ।**
**ಮೇರುಪೃಷ್ಠಂ ಸುರಾ ಜಗ್ಮುರವತೇರುಶ್ಚ ಭೂತಲೇ ॥ ೩೨ ॥**

**ಕಂಸಾಯ ಚಾಷ್ಟಮೋ ಗರ್ಭೋ ದೇವಕ್ಯಾ ಧರಣೀತಲೇ ।**
**ಭವಿಷ್ಯತೀತ್ಯಾಚಚಕ್ಷೇ ಭಗವಾನ್ನಾರದೋ ಮುನಿಃ ॥ ೩೩ ॥**

**ಕಂಸೋಽಪಿ ತದುಪಶ್ರುತ್ಯ ನಾರದಾತ್ಕುಪಿತಸ್ತತಃ ।**
**ದೇವಕೀಂ ವಸುದೇವಂ ಚ ಗೃಹೇ ಗುಪ್ತಾವಧಾರಯತ್ ॥ ೩೪ ॥**

**ಜಾತಂ ಜಾತಂ ಚ ಕಂಸಾಯ ತೇನೈವೋಕ್ತಂ ಯಥಾ ಪುರಾ ।**
**ತಥೈವ ವಸುದೇವೋಽಪಿ ಪುತ್ರಮರ್ಪಿತವಾನ್ದ್ವಿಜಾಃ ॥ ೩೫ ॥**

**ಹಿರಣ್ಯಕಶಿಪೋಃ ಪುತ್ರಾಃ ಷಡ್ಗರ್ಭಾ ಇತಿ ವಿಶ್ರುತಾಃ ।**
**ವಿಷ್ಣುಪ್ರಯುಕ್ತಾ ತಾನ್ನಿದ್ರಾ ಕ್ರಮಾದ್ಗರ್ಭೇ ನ್ಯಯೋಜಯತ್ ॥ ೩೬ ॥**

---

೩೨. ಅದೃಶ್ಯನಾದ ನಾರಾಯಣನನ್ನು ನಮಸ್ಕರಿಸಿ ದೇವತೆಗಳೆಲ್ಲರೂ ಭೂಮಿಯಲ್ಲಿ ಅವತರಿಸುವುದಕ್ಕೋಸ್ಕರ ಮೇರುಪರ್ವತದಿಂದ ಹೊರಟರು.

೩೩. ಒಂದಾನೊಂದು ದಿವಸ ನಾರದನು ಕಂಸನ ಹತ್ತಿರಕ್ಕೆ ಬಂದು ದೇವಕಿಯ ಎಂಟನೆಯ ಗರ್ಭದಿಂದ ನಿನಗೆ ಮರಣವಿದೆಯೆಂದು ತಿಳಿಸಿದನು.

೩೪. ನಾರದನು ಹೇಳಿದುದನ್ನು ಕೇಳಿ ಕಂಸನು ಅತ್ಯಂತ ಕೋಪಗೊಂಡು ದೇವಕಿಯನ್ನೂ ವಸುದೇವನನ್ನೂ ಕಾರಾಗೃಹದಲ್ಲಿ ಇಡಿಸಿದನು.

೩೫. ಎಲೈ ಋಷಿಗಳಿರಾ, ಕಂಸನ ಆಜ್ಞೆಯಂತೆ ವಸುದೇವನು ತನಗೆ ಹುಟ್ಟಿದ ಪುತ್ರರನ್ನೆಲ್ಲಾ ಕಂಸನಿಗೆ ಅರ್ಪಿಸುತ್ತಿದ್ದನು.

೩೬-೩೭. ಹಿರಣ್ಯಕಶಿಪುವಿಗೆ ಷಡ್ಗರ್ಭರೆಂದು ಪ್ರಖ್ಯಾತರಾದ ಪುತ್ರರಿದ್ದರು. ಅವರನ್ನು ಗರ್ಭದಲ್ಲಿಯೇ ವಿಷ್ಣುವಿನ ಆಜ್ಞೆಯಂತೆ ನಿದ್ರೆಯು ಹೋಗಿ ಸೇರಿದ್ದಳು. ಅದರಿಂದವರು ಅಜ್ಞರಾಗಿದ್ದರು. ಅಂತಹ ಮಹಾ

ಯೋಗನಿದ್ರಾ ಮಹಾಮಾಯಾ ವೈಷ್ಣವೀ ಮೋಹಿತಂ ಯಯಾ ।
ಅವಿದ್ಯಯಾ ಜಗತ್ಸರ್ವಂ ತಾಮಾಹ ಭಗವಾನ್ಹರಿಃ ॥ ೩೭ ॥

॥ ವಿಷ್ಣುರುವಾಚ ॥

ಗಚ್ಛ ನಿದ್ರೇ ಮಮಾದೇಶಾತ್ಪಾತಾಲತಲಸಂಶ್ರಯಾನ್ ।
ಏಕೈಕಶ್ಯೇನ ಷಡ್ಗರ್ಭಾನ್ದೇವಕೀಜಠರೇ ನಯ ॥ ೩೮ ॥

ಹತೇಷು ತೇಷು ಕಂಸೇನ ಶೇಷಾಖ್ಯೋಽಂಶಸ್ತತೋಽನಘಃ ।
ಅಂಶಾಂಶೋನೋದರೇ ತಸ್ಯಾಃ ಸಪ್ತಮಃ ಸಂಭವಿಷ್ಯತಿ ॥ ೩೯ ॥

ಗೋಕುಲೇ ವಸುದೇವಸ್ಯ ಭಾರ್ಯಾ ವೈ ರೋಹಿಣೀ ಸ್ಥಿತಾ ।
ತಸ್ಯಾಃ ಪ್ರಸೂತಿಸಮಯೇ ಗರ್ಭೋ ನೇಯಸ್ತ್ವಯೋದರಂ ॥ ೪೦ ॥

ಸಪ್ತಮೋ ಭೋಜರಾಜಸ್ಯ ಭಯಾದ್ರೋಧೋಪರೋಧತಃ ।
ದೇವಕ್ಯಾಃ ಪತಿತೋ ಗರ್ಭ ಇತಿ ಲೋಕೋ ವದಿಷ್ಯತಿ ॥ ೪೧ ॥

---

ಮಾಯಾಸ್ವರೂಪಳಾದ ಆ ನಿದ್ರಾಪ್ರಭಾವದಿಂದ ಪ್ರಪಂಚವೆಲ್ಲವೂ ಅಜ್ಞಾನದಲ್ಲಿ ಮುಳುಗಿರುವುದು. ಆ ನಿದ್ರೆಯನ್ನು ಕರೆದು ವಿಷ್ಣುವು

೩೮. ಎಲೈ ನಿದ್ರೆಯೇ, ನನ್ನ ಆಜ್ಞೆಯಮೇರೆಗೆ ಪಾತಾಲಲೋಕದಲ್ಲಿರುವ ಹಿರಣ್ಯಕಶಿಪುವಿನ ಮಕ್ಕಳಾದ ಷಡ್ಗರ್ಭರನ್ನು ದೇವಕಿಯ ಆರು ಗರ್ಭಗಳಲ್ಲಿಯೂ ಇರಿಸು.

೩೯. ಆರು ಗರ್ಭಗಳಲ್ಲಿ ಹುಟ್ಟಿದ ಆರು ಜನರನ್ನೂ ಕಂಸನು ಕೊಂದುಹಾಕುವನು. ಆವಳ ಏಳನೆಯ ಗರ್ಭದಲ್ಲಿ ಆದಿಶೇಷನಾಂಶದಿಂದ ಪುತ್ರನು ಜನಿಸುವನು.

೪೦. ಆ ಏಳನೆಯ ಗರ್ಭದಲ್ಲಿ ಹುಟ್ಟಿದ ಪುತ್ರನನ್ನು ನೀನು ಗೋಕುಲದಲ್ಲಿ ವಸುದೇವನ ಮತ್ತೊಬ್ಬ ಹೆಂಡತಿ ರೋಹಿಣಿಯ ಪ್ರಸವಸಮಯದಲ್ಲಿ ತೆಗೆದುಕೊಂಡುಹೋಗಿ ಅಲ್ಲಿರಿಸಬೇಕು.

೪೧. ಆದರೆ ದೇವಕಿಯ ಏಳನೆಯ ಗರ್ಭವು ಭೋಜರಾಜನ ಭಯಕ್ಕೆ ಸಿಕ್ಕಿ ಅವನ ತೊಂದರೆಗೊಳಗಾಗಿ ಸ್ರಾವವಾಯಿತು ಎಂದು ಲೋಕದಲ್ಲೆಲ್ಲಾ ವರ್ತಮಾನವು ಹರಡುವುದು.

**ಗರ್ಭಸಂಕರ್ಷಣಾತ್ಸೋಽಥ ಲೋಕೇ ಸಂಕರ್ಷಣೇತಿ ವೈ ।**
**ಸಂಜ್ಞಾಮವಾಪ್ಸ್ಯತೇ ವೀರಃ ಶ್ವೇತಾದ್ರಿಶಿಖರೋಪಮಃ ॥ ೪೨ ॥**

**ತತೋಽಹಂ ಸಂಭವಿಷ್ಯಾಮಿ ದೇವಕೀಜಠರೇ ಶುಭೇ ।**
**ಗರ್ಭೇ ತ್ವಯಾ ಯಶೋದಾಯಾ ಗಂತವ್ಯಮವಿಲಂಬಿತಂ ॥ ೪೩ ॥**

**ಪ್ರಾವೃಟ್ಕಾಲೇ ಚ ನಭಸಿ ಕೃಷ್ಣಾಷ್ಟಮ್ಯಾಮಹಂ ನಿಶಿ ।**
**ಉತ್ಪತ್ಸ್ಯಾಮಿ ನವಮ್ಯಾಂ ಚ ಪ್ರಸೂತಿಂ ತ್ವಮವಾಪ್ಸ್ಯಸಿ ॥ ೪೪ ॥**

**ಯಶೋದಾಶಯನೇ ಮಾಂ ತು ದೇವಕ್ಯಾಸ್ತ್ವಾಮನಿಂದಿತೇ ।**
**ಮಚ್ಛಕ್ತಿಪ್ರೇರಿತಮತಿರ್ವಸುದೇವೋ ನಯಿಷ್ಯತಿ ॥ ೪೫ ॥**

**ಕಂಸಶ್ಚ ತ್ವಾಮುಪಾದಾಯ ದೇವಿ ಶೈಲಶಿಲಾತಲೇ ।**
**ಪ್ರಕ್ಷೇಪ್ಸ್ಯತ್ಯಂತರಿಕ್ಷೇ ಚ ತ್ವಂ ಸ್ಥಾನಂ ಸಮವಾಪ್ಸ್ಯಸಿ ॥ ೪೬ ॥**

---

೪೨. ಈ ಗರ್ಭವನ್ನು ಇಲ್ಲಿಂದ ಗೋಕುಲಕ್ಕೆ ಸಂಕರ್ಷಿಸಿದ್ದರಿಂದ (ತೆಗೆದುಕೊಂಡುಹೋದುದರಿಂದ) ಇದಕ್ಕೆ ಸಂಕರ್ಷಣನೆಂದು (ಬಲರಾಮ) ಹೆಸರಾಯಿತು. ಇವನು ವೀರನೂ, ಶ್ವೇತಾದ್ರಿಶಿಖರದಂತೆ ನಿಶ್ಚಲನೂ ಆಗುವನು.

೪೩. ಅನಂತರ ನಾನು ದೇವಕಿಯ ಎಂಟನೆಯ ಗರ್ಭದಲ್ಲಿ ಹುಟ್ಟುವೆನು. ನೀನು ಯಶೋದೆಯ ಗರ್ಭದಲ್ಲಿ ಹುಟ್ಟು. ಆದುದರಿಂದ ನೀನು ಜಾಗ್ರತೆಯಾಗಿ ಹೊರಡು.

೪೪. ವರ್ಷಋತುವಿನಲ್ಲಿ ಕೃಷ್ಣಪಕ್ಷದ ಅಷ್ಟಮಿಯಾದಿನ ರಾತ್ರೆ ನಾನು ಹುಟ್ಟುವೆನು. ನೀನು ನವಮಿಯಾ ದಿವಸ ಹುಟ್ಟು.

೪೫. ನನ್ನ ಶಕ್ತಿಯಿಂದ ಪ್ರೇರೇಪಿತನಾದ ವಸುದೇವನು ನನ್ನನ್ನು ಯಶೋದೆಯ ಹತ್ತಿರವೂ ನಿನ್ನನ್ನು ದೇವಕಿಯಹತ್ತಿರವೂ ಬದಲಾಯಿಸುವನು.

೪೬. ಅನಂತರ ಕಂಸನು ನಿನ್ನನ್ನು ತೆಗೆದುಕೊಂಡು ಕೊಂದುಹಾಕಲು ಕಲ್ಲು ಬಂಡೆಮೇಲೆ ಒಗೆಯುವನು. ಆಗ ನೀನು ಅಂತರಿಕ್ಷದಲ್ಲಿಯೇ ಮಾಯವಾಗಿ ನಿನ್ನ ಸ್ಥಾನಕ್ಕೆ ಬಂದು ಸೇರುವೆ.

ತತಸ್ತ್ವಾಂ ಶತಧಾ ಶಕ್ರಃ ಪ್ರಣಮ್ಯ ಮಮ ಗೌರವಾತ್ ।
ಪ್ರಣಿಪಾತಾನತಶಿರಾ ಭಗಿನೀತ್ಯೇ ಗ್ರಹೀಷ್ಯತಿ ॥ ೪೭ ॥

ತತಃ ಶುಂಭನಿಶುಂಭಾದೀನ್ಹತ್ವಾ ದೈತ್ಯಾನ್ಸಹಸ್ರಶಃ ।
ಸ್ಥಾನೈರನೇಕೈಃ ಪೃಥಿವೀಮಶೇಷಾಂ ಮಂಡಯಿಷ್ಯಸಿ ॥ ೪೮ ॥

ತ್ವಂ ಭೂತಿಃ ಸಂನತಿಃ ಕೀರ್ತಿಃ ಕಾಂತಿರ್ವೈ ಪೃಥಿವೀ ಧೃತಿಃ ।
ಲಜ್ಜಾ ಪುಷ್ಟಿರುಷಾ ಯಾ ಚ ಕಾಚಿದನ್ಯಾ ತ್ವಮೇವ ಸಾ ॥ ೪೯ ॥

ಯೇ ತ್ವಾಮಾರ್ಯೇತಿ ದುರ್ಗೇತಿ ವೇದಗರ್ಭೇಽಂಬಿಕೇತಿ ಚ ।
ಭದ್ರೇತಿ ಭದ್ರಕಾಲೀತಿ ಕ್ಷೇಮ್ಯಾ ಕ್ಷೇಮಂಕರೀತಿ ಚ ॥ ೫೦ ॥

ಪ್ರಾತಶ್ಚೈವಾಪರಾಹ್ಣೇ ಚ ಸ್ತೋಷ್ಯಂತ್ಯಾನಮ್ರಮೂರ್ತಯಃ ।
ತೇಷಾಂ ಹಿ ವಾಂಛಿತಂ ಸರ್ವಂ ಮತ್ಪ್ರಸಾದಾದ್ಭವಿಷ್ಯತಿ ॥ ೫೧ ॥

---

೪೭. ಇಂದ್ರನು ನಿನ್ನನ್ನು ನೂರಾರು ಬಾರಿ ನಮಸ್ಕರಿಸಿ ವಿನಯದಿಂದ ನಿನ್ನನ್ನು ಬರಮಾಡಿಕೊಂಡು ತಂಗಿಯಂತೆ ಭಾವಿಸಿ ರಕ್ಷಿಸುವನು.

೪೮. ನೀನು ಶುಂಭ ನಿಶುಂಭರೇ ಮೊದಲಾದ ಸಾವಿರಾರುಜನ ದೈತ್ಯರನ್ನು ಕೊಂದು ಪೃಥಿವಿಯ ಅನೇಕ ಜಾಗಗಳಲ್ಲಿ ಪ್ರಸಿದ್ಧಿಪಡೆಯುವೆ.

೪೯. ನೀನು ಐಶ್ವರ್ಯಸ್ವರೂಪಳು, ವಿನಯಸ್ವರೂಪಳು, ಕೀರ್ತಿ, ಕಾಂತಿ, ಪೃಥಿವೀ, ಧೈರ್ಯ, ಲಜ್ಜೆ, ಪುಷ್ಟಿ, ಉಷಾ ಇವೆಲ್ಲವೂ ನೀನೇ.

೫೦-೫೧. ಯಾರು ನಿನ್ನನ್ನು ಆರ್ಯೆ, ದುರ್ಗಾ, ವೇದಗರ್ಭಾ, ಅಂಬಿಕಾ, ಭದ್ರಾ, ಭದ್ರಕಾಲೀ, ಕ್ಷೇಮ್ಯಾ, ಕ್ಷೇಮಂಕರೀ ಎಂಬುದಾಗಿ ಬೆಳಗ್ಗೆ ಮತ್ತು ಸಾಯಿಂಕಾಲಗಳಲ್ಲಿ ವಿನಯವಾಗಿ ಸ್ತೋತ್ರಮಾಡುವರೋ ಅವರೆಲ್ಲರಿಗೂ ನನ್ನ ಅನುಗ್ರಹದಿಂದ ಇಷ್ಟಾರ್ಥಗಳು ನೆರವೇರುವುವು.

ಸುರಾಮಾಂಸೋಪಹಾರೈಸ್ತು ಭಕ್ಷ್ಯಭೋಜ್ಯೈಶ್ಚ ಪೂಜಿತಾ ।
ನೃಣಾಮಶೇಷಕಾಮಾಂಸ್ತ್ವಂ ಪ್ರಸನ್ನಾ ಯಾಂ ಪ್ರದಾಸ್ಯಸಿ ॥ ೫೨ ॥

ತೇ ಸರ್ವೇ ಸರ್ವದಾ ಭದ್ರಾ ಮತ್ಪ್ರಸಾದಾದಸಂಶಯಂ ।
ಅಸಂದಿಗ್ಧಂ ಭವಿಷ್ಯಂತಿ ಗಚ್ಛ ದೇವಿ ಯಥೋದಿತಂ ॥ ೫೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಹರೇರಂಶಾವತಾರನಿರೂಪಣಂ
ನಾಮೈಕಾಶೀತ್ಯಧಿಕಶತತಮೋಽಧ್ಯಾಯಃ

---

೫೨-೫೩. ನಿನ್ನನ್ನು ಮದ್ಯಮಾಂಸಾದಿಗಳಿಂದಲೂ ಭಕ್ಷ್ಯಭೋಜ್ಯಾದಿಗಳಿಂದಲೂ ಪೂಜಿಸುವವರಿಗೆ ನೀನು ಪ್ರಸನ್ನಳಾಗಿ ಸರ್ವೇಷ್ಟಾರ್ಥಗಳನ್ನೂ ನೆರವೇರಿಸುವೆ. ನನ್ನ ಅನುಗ್ರಹದಿಂದ ಅವರಿಗೆ ಯಾವಾಗಲೂ ಒಳ್ಳೆಯದಾಗುವುದು. ಈ ವಿಷಯದಲ್ಲಿ ಸಂಶಯವಿಲ್ಲ. ಆದುದರಿಂದ ಎಲೌ ದೇವಿ, ನೀನಿನ್ನು ಹೊರಡು. ನಾನು ಹೇಳಿದಂತೆ ಮಾಡು ಎಂದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಹರಿಯಅಂಶಾವತಾರನಿರೂಪಣವೆಂಬ ನೂರೆಂಭತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ದ್ವ್ಯಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಯಥೋಕ್ತಂ ಸಾ ಜಗದ್ಧಾತ್ರೀ ದೇವದೇವೇನ ವೈ ಪುರಾ ।**
**ಷಡ್ಗರ್ಭಗರ್ಭವಿನ್ಯಾಸಂ ಚಕ್ರೇ ಚಾನ್ಯಸ್ಯ ಕರ್ಷಣಂ ॥ ೧ ॥**

**ಸಪ್ತಮೋ ರೋಹಿಣೀಂ ಪ್ರಾಪ್ತೇ ಗರ್ಭೇ ಗರ್ಭೇ ತತೋ ಹರಿಃ ।**
**ಲೋಕತ್ರಯೋಪಕಾರಾಯ ದೇವಕ್ಯಾಃ ಪ್ರವಿವೇಶ ವೈ ॥ ೨ ॥**

**ಯೋಗನಿದ್ರಾ ಯಶೋದಾಯಾಸ್ತಸ್ಮಿನ್ನೇವ ತತೋ ದಿನೇ ।**
**ಸಂಭೂತಾ ಜಠರೇ ತದ್ವದ್ಯಥೋಕ್ತಂ ಪರಮೇಷ್ಠಿನಾ ॥ ೩ ॥**

## ನೂರೆಂಭತ್ತೆರಡನೆಯ ಅಧ್ಯಾಯವು

೧. ವ್ಯಾಸನು ಹೇಳಿದನು :—ವಿಷ್ಣುವಿನ ಅಪ್ಪಣೆಯಂತೆ ಜಗನ್ಮಾತೃವಾದ ನಿದ್ರೆಯು ದೇವಕಿಯ ಗರ್ಭದಲ್ಲಿ ಷಡ್ಗರ್ಭರನ್ನು ಇರಿಸಿದಳು ಮತ್ತು ಏಳನೆಯ ಗರ್ಭವನ್ನು ರೋಹಿಣಿಯ ಹತ್ತಿರದಲ್ಲಿಯೂ ಇರಿಸಿದಳು.

೨. ಏಳನೆಯ ಗರ್ಭವನ್ನು ರೋಹಿಣಿಯ ಸಮೀಪಕ್ಕೆ ತಲುಪಿಸಿದ ನಂತರ ಲೋಕತ್ರಯೋಪಕಾರಾರ್ಥವಾಗಿ ವಿಷ್ಣುವು ದೇವಕಿಯ ಗರ್ಭವನ್ನು ಪ್ರವೇಶಿಸಿದನು.

೩. ವಿಷ್ಣುವಿನ ಯೋಗನಿದ್ರೆಯು ಅದೇ ದಿನದಲ್ಲಿ ಯಶೋದೆಯ ಉದರದಲ್ಲಿ ಜನಿಸಿದಳು.

ತತೋ ಗ್ರಹಗಣಃ ಸಮ್ಯಕ್ ಪ್ರಚಚಾರ ದಿವಿ ದ್ವಿಜಾಃ ।
ವಿಷ್ಣೋರಂಶೇ ಮಹೀಂ ಯಾತ ಋತವೋಽಪ್ಯಭವನ್ ಶುಭಾಃ ॥ ೪ ॥

ನೋತ್ಸೇಹೇ ದೇವಕೀಂ ದ್ರಷ್ಟುಂ ಕಶ್ಚಿದಪ್ಯತಿತೇಜಸಾ ।
ಜಾಜ್ವಲ್ಯಮಾನಾಂ ತಾಂ ದೃಷ್ಟ್ವಾ ಮನಾಂಸಿ ಕ್ಷೋಭಮಾಯಯುಃ ॥ ೫ ॥

ಅದೃಷ್ಟಾಂ ಪುರುಷೈಃ ಸ್ತ್ರೀಭಿರ್ದೇವಕೀಂ ದೇವತಾಗಣಾಃ ।
ಬಿಭ್ರಾಣಾಂ ವಪುಷಾ ವಿಷ್ಣುಂ ತುಷ್ಟುವುಸ್ತಾಮಹರ್ನಿಶಂ ॥ ೬ ॥

॥ ದೇವಾ ಊಚುಃ ॥

ತ್ವಂ ಸ್ವಾಹಾ ತ್ವಂ ಸ್ವಧಾ ವಿದ್ಯಾ ಸುಧಾ ತ್ವಂ ಜ್ಯೋತಿರೇವ ಚ ।
ತ್ವಂ ಸರ್ವಲೋಕರಕ್ಷಾರ್ಥಮವತೀರ್ಣಾ ಮಹೀತಲೇ ॥ ೭ ॥

ಪ್ರಸೀದ ದೇವಿ ಸರ್ವಸ್ಯ ಜಗತಸ್ತ್ವಂ ಶುಭಂ ಕುರು ।
ಪ್ರೀತ್ಯರ್ಥಂ ಧಾರಯೇಶಾನಂ ಧೃತಂ ಯೇನಾಖಿಲಂ ಜಗತ್ ॥ ೮ ॥

---

೪. ಅಂದು ಗ್ರಹಗಳೆಲ್ಲವೂ ಅಂತರಿಕ್ಷದಲ್ಲಿ ಸರಿಯಾದ ಜಾಗಗಳಲ್ಲಿ ಸಂಚರಿಸಿದವು. ಋತುಗಳೂ ಸಹ ಶುಭಕರಗಳಾಗಿದ್ದವು.

೫. ಅತಿ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಆ ದೇವಕಿಯನ್ನು ನೋಡುವುದಕ್ಕೂ ಆಗುತ್ತಿರಲಿಲ್ಲ. ಅಥವಾ ನೋಡಿದರೂ ಮನಸ್ಸೆಲ್ಲವೂ ಚಂಚಲವಾಗುತ್ತಿದ್ದಿತು.

೬. ಪುರುಷರಿಂದಲೂ ಸ್ತ್ರೀಯರಿಂದಲೂ ನೋಡಲಸಾಧ್ಯಳಾದ ದೇವಕಿಯನ್ನು ನೋಡಿ ದೇವತೆಗಳು ಅವಳು ಗರ್ಭದಲ್ಲಿ ವಿಷ್ಣುವನ್ನು ಧರಿಸಿರುವಳೆಂದು ತಿಳಿದು ಅವಳನ್ನು ಯಾವಾಗಲೂ ಹೊಗಳುತ್ತಿದ್ದರು.

೭-೮. ನೀನು ಸ್ವಾಹಾ, ಸ್ವಧಾ, ವಿದ್ಯಾಸ್ವರೂಪಳು. ಅಮೃತಸ್ವರೂಪಳು. ಜ್ಯೋತಿಸ್ವರೂಪಳು. ಸರ್ವಲೋಕವನ್ನೂ ರಕ್ಷಿಸುವುದಕ್ಕೋಸ್ಕರ ಭೂಮಿಯಲ್ಲಿ ಹುಟ್ಟಿರುವೆ. ಎಲೌ ದೇವಿ, ಪ್ರಸನ್ನಳಾಗು. ಜಗತ್ತಿಗೆ ಮಂಗಳವನ್ನುಂಟುಮಾಡು. ಅಖಿಲಜಗತ್ತನ್ನೂ ತನ್ನುದರದಲ್ಲಿ ಧರಿಸಿರುವ ವಿಷ್ಣುವನ್ನು ನೀನು ನಿನ್ನುದರದಲ್ಲಿ ಧರಿಸು. ಎಂದರು.

॥ ವ್ಯಾಸ ಉವಾಚ ॥

ಏವಂ ಸಂಸ್ತೂಯಮಾನಾ ಸಾ ದೇವೈರ್ದೇವಮಧಾರಯತ್ ।
ಗರ್ಭೇಣ ಪುಂಡರೀಕಾಕ್ಷಂ ಜಗತಾಂ ತ್ರಾಣಕಾರಣಂ ॥ ೯ ॥

ತತೋಽಖಿಲಜಗತ್ಪದ್ಮಬೋಧಾಯಾಚ್ಯುತಭಾನುನಾ ।
ದೇವಕ್ಯಾಃ ಪೂರ್ವಸಂಧ್ಯಾಯಾಮಾವಿರ್ಭೂತಂ ಮಹಾತ್ಮನಾ ॥ ೧೦ ॥

ಮಧ್ಯರಾತ್ರೇಽಖಿಲಾಧಾರೇ ಜಾಯಮಾನೇ ಜನಾರ್ದನೇ ।
ಮನ್ದಂ ಜಗರ್ಜುರ್ಜಲದಾಃ ಪುಷ್ಪವೃಷ್ಟಿಮುಚಃ ಸುರಾಃ ॥ ೧೧ ॥

ಫುಲ್ಲೇಂದೀವರಪತ್ರಾಭಂ ಚತುರ್ಬಾಹುಮುದೀಕ್ಷ್ಯ ತಂ ।
ಶ್ರೀವತ್ಸವಕ್ಷಸಂ ಜಾತಂ ತುಷ್ಟಾವಾನಕದುಂದುಭಿಃ ॥ ೧೨ ॥

ಅಭಿಷ್ಟೂಯ ಚ ತಂ ವಾಗ್ಭಿಃ ಪ್ರಸನ್ನಾಭಿರ್ಮಹಾಮತಿಃ ।
ವಿಜ್ಞಾಪಯಾಮಾಸ ತದಾ ಕಂಸಾದ್ಭೀತೋ ದ್ವಿಜೋತ್ತಮಾಃ ॥ ೧೩ ॥

---

೯. ದೇವತೆಗಳು ಈರೀತಿಯಾಗಿ ಸ್ತೋತ್ರಮಾಡುತ್ತಿರಲು ದೇವಕಿಯು ಜಗದ್ರಕ್ಷನಾದ ಪುಂಡರೀಕಾಕ್ಷನನ್ನು ತನ್ನ ಗರ್ಭದಲ್ಲಿ ಧರಿಸಿದಳು.

೧೦. ಅನಂತರ ಅಚ್ಯುತನು ಸಮಸ್ತಪ್ರಪಂಚವೆಂಬ ಪದ್ಮಗಳಿಗೆ ಸೂರ್ಯಸ್ವರೂಪನಾಗಿ ಎಂದರೆ ಸುಪ್ತವಾದ ಪ್ರಪಂಚವನ್ನು ಚೇತನಗೊಳಿಸಲು ದೇವಕಿಯ ಗರ್ಭದಲ್ಲಿ ಮಧ್ಯರಾತ್ರಿಯ ಸಮಯದಲ್ಲಿ ಜನಿಸಿದನು.

೧೧. ಅಖಿಲಜಗದಾಧಾರನಾದ ಜನಾರ್ದನನು ಮಧ್ಯರಾತ್ರಿಯ ಸಮಯದಲ್ಲಿ ಹುಟ್ಟಲು ಮೇಘಗಳೆಲ್ಲವೂ ಗಂಭೀರವಾಗಿ ಧ್ವನಿಮಾಡಿದುವು. ದೇವತೆಗಳೆಲ್ಲರೂ ಪುಷ್ಪವೃಷ್ಟಿಯನ್ನು ಕರೆದರು.

೧೨-೧೩. ವಸುದೇವನೂ ಸಹ ಕಮಲದಂತೆ ವಿಶಾಲಾಕ್ಷನಾಗಿ ನಾಲ್ಕು ಕೈಗಳಿಂದಲೂ, ಶ್ರೀವತ್ಸವೆಂಬ ಚಿಹ್ನೆಯಿಂದಲೂ ಶೋಭಿಸುತ್ತಿರುವ ಪುತ್ರನನ್ನು ನೋಡಿ ಪ್ರಸನ್ನವಾಗಿರುವ ಮಾತುಗಳಿಂದ ಸ್ತುತಿಸಿ ಕಂಸನ ಭಯದಿಂದ ಪರಮಾತ್ಮನನ್ನು ಕುರಿತು ಇಂತು ವಿಜ್ಞಾಪಿಸಿಕೊಂಡನು.

|| ವಸುದೇವ ಉವಾಚ ||

ಜ್ಞಾತೋಽಸಿ ದೇವದೇವೇಶ ಶಂಖಚಕ್ರಗದಾಧರ ।
ದಿವ್ಯಂ ರೂಪಮಿದಂ ದೇವ ಪ್ರಸಾದೇನೋಪಸಂಹರ || ೧೪ ||

ಅದ್ಯೈವ ದೇವ ಕಂಸೋಽಯಂ ಕುರುತೇ ಮಮ ಯಾತನಾಂ ।
ಅವತೀರ್ಣಮಿತಿ ಜ್ಞಾತ್ವಾ ತ್ವಾಮಸ್ಮಿನ್ಮನ್ದಿರೇ ಮಮ || ೧೫ ||

|| ದೇವಕ್ಯುವಾಚ ||

ಯೋಽನಂತರೂಪೋಽಖಿಲವಿಶ್ವರೂಪೋ
ಗರ್ಭೇಽಪಿ ಲೋಕಾನ್ವಪುಷಾ ಬಿಭರ್ತಿ ।
ಪ್ರಸೀದತಾಮೇಷ ಸ ದೇವದೇವಃ
ಸ್ವಾಮಾಯಯಾವಿಷ್ಕೃತಬಾಲರೂಪಃ || ೧೬ ||

ಉಪಸಂಹರ ಸರ್ವಾತ್ಮನ್ರೂಪಮೇತಚ್ಚತುರ್ಭುಜಂ ।
ಜಾನಾತು ಮಾವತಾರಂ ತೇ ಕಂಸೋಽಯಂ ದಿತಿಜಾಂತಕ || ೧೭ ||

---

೧೪-೧೫. ದೇವದೇವನಾದ ಶಂಖಚಕ್ರಗದಾಧರನೇ, ನಿನ್ನ ಈ ದಿವ್ಯ ರೂಪವನ್ನು ಉಪಸಂಹಾರಮಾಡಿಕೋ. ಏಕೆಂದರೆ ಈ ಕಾರಾಗೃಹದಪು ತ ಜನನವಾಯಿತೆಂದು ತಿಳಿದು ಕಂಸನು ಪುತ್ರನನ್ನು ಕೊಲ್ಲಲು ನನ್ನನ್ನು ಪೀಡಿಸಲು ಬರುವನು ಎಂದನು.

೧೬. ದೇವಕಿಯು ಹೇಳಿದಳು :—ಪರಮಾತ್ಮನೇ, ನೀನು ಅನಂತ ರೂಪಧಾರಿಯು. ಅಖಿಲಪ್ರಪಂಚಕ್ಕೂ ಏಕರೂಪನು. ಲೋಕಗಳನ್ನೆಲ್ಲಾ ನಿನ್ನ ಶರೀರದಲ್ಲಿ ಧರಿಸಿರುವೆ. ಇಂತಹ ನೀನು ಈಗ ಮಾಯೆಯಿಂದ ಶಿಶುರೂಪನಾಗಿರುವೆ. ನೀನು ಪ್ರಸನ್ನನಾಗು.

೧೭, ಸರ್ವಾತ್ಮಸ್ವರೂಪನೇ, ಚತುರ್ಭುಜಸಹಿತವಾದ ಈ ನಿನ್ನ ದಿವ್ಯರೂಪವನ್ನು ಉಪಸಂಹಾರಮಾಡಿಕೋ ಕಂಸಾಸುರನು ನಿನ್ನ ಈ ಅವತಾರವನ್ನು ತಿಳಿಯಕೂಡದು ಎಂದಳು.

॥ ಶ್ರೀಭಗವಾನುವಾಚ ॥

ಸ್ತುತೋऽಹಂ ಯತ್ತ್ವಯಾ ಪೂರ್ವಂ ಪುತ್ರಾರ್ಥಿನ್ಯಾ ತದದ್ಯ ತೇ ।
ಸಫಲಂ ದೇವಿ ಸಂಜಾತಂ ಜಾತೋऽಹಂ ಯತ್ತವೋದರಾತ್ ॥ ೧೮ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಭಗವಾಂಸ್ತೂಷ್ಣೀಂ ಬಭೂವ ಮುನಿಸತ್ತಮಾಃ ।
ವಸುದೇವೋऽಪಿ ತಂ ರಾತ್ರಾವಾದಾಯ ಪ್ರಯಯೌ ಬಹಿಃ ॥ ೧೯ ॥

ಮೋಹಿತಾಶ್ಚಾಭವಂಸ್ತತ್ರ ರಕ್ಷಿಣೋ ಯೋಗನಿದ್ರಯಾ ।
ಮಥುರಾದ್ವಾರಪಾಲಾಶ್ಚ ವ್ರಜತ್ಯಾನಕದುನ್ದುಭೌ ॥ ೨೦ ॥

ವರ್ಷತಾಂ ಜಲದಾನಾಂ ಚ ತತ್ತೋಯಮುಲ್ಬಣಂ ನಿಶಿ ।
ಸಂಛಾದ್ಯ ತಂ ಯಯೌ ಶೇಷಃ ಫಣೈರಾನಕದುನ್ದುಭಿಂ ॥ ೨೧ ॥

---

೧೮. ಅದನ್ನು ಕೇಳಿ ಭಗವಂತನು :—ಎಲೌ ದೇವಕಿಯೇ, ನೀನು ಪೂರ್ವದಲ್ಲಿ ಪುತ್ರನು ಬೇಕೆಂದು ನನ್ನನ್ನು ಪ್ರಾರ್ಥಿಸಿದೆ. ಈಗ ನಿನ್ನ ಪ್ರಾರ್ಥನೆಯು ಸಫಲವಾಯಿತು. ಅದಕ್ಕೋಸ್ಕರ ನಾನು ನಿನ್ನ ಉದರದಲ್ಲಿ ಹುಟ್ಟಿರುವೆನು. ಎಂದನು.

೧೯. ಈರೀತಿಯಾಗಿ ಹೇಳಿ ಭಗವಂತನು ಸುಮ್ಮನಾದನು. ವಸುದೇವನೂ ಸಹ ಆ ಮಗುವನ್ನು ರಾತ್ರಿಯಲ್ಲಿಯೇ ತೆಗೆದುಕೊಂಡು ಹೋದನು.

೨೦. ವಸುದೇವನು ಮಗುವನ್ನು ತೆಗೆದುಕೊಂಡು ಹೋಗುತ್ತಿರಲಾಗಿ ಕಾರಾಗಾರದ ರಕ್ಷಕರೆಲ್ಲರೂ ವಿಷ್ಣುವಿನ ಮಾಯೆಯಿಂದ ಮೋಹಿತರಾಗಿ ನಿದ್ರೆ ಮಾಡಲು ಪ್ರಾರಂಭಿಸಿದರು. ಮಥುರಾನಗರದ ದ್ವಾರಪಾಲಕರೂ ನಿದ್ರೆ ಮಾಡಲು ಪ್ರಾರಂಭಿಸಿದರು.

೨೧. ಆ ರಾತ್ರಿಯಲ್ಲಿ ಮೇಘಗಳೆಲ್ಲವೂ ಜೋರಾಗಿ ಮಳೆಸುರಿಸಲು ಪ್ರಾರಂಭಿಸಿದವು. ಆಗ ಆದಿಶೇಷನು ತನ್ನ ಹೆಡೆಗಳನ್ನು ವಸುದೇವನಿಗೆ ಹಿಡಿದು ಮಳೆಯಿಂದ ನೆನೆಯದಂತೆ ಮಾಡಿದನು.

ಯಮುನಾಂ ಚಾತಿಗಂಭೀರಾಂ ನಾನಾವರ್ತಶತಾಕುಲಾಂ ।
ವಸುದೇವೋ ವಹನ್ವಿಷ್ಣುಂ ಜಾನುಮಾತ್ರವಹಾಂ ಯಯೌ ॥ ೨೨ ॥

ಕಂಸಸ್ಯ ಕರಮಾದಾಯ ತತ್ರೈವಾಭ್ಯಾಗತಾಂಸ್ತಟೇ ।
ನನ್ದಾದೀನ್ಗೋಪವೃದ್ಧಾಂಶ್ಚ ಯಮುನಾಯಾಂ ದದರ್ಶ ಸಃ ॥ ೨೩ ॥

ತಸ್ಮಿನ್ಕಾಲೇ ಯಶೋದಾಪಿ ಮೋಹಿತಾ ಯೋಗನಿದ್ರಯಾ ।
ತಾಮೇವ ಕನ್ಯಾಂ ಮುನಯಃ ಪ್ರಾಸೂತ ಮೋಹಿತೇ ಜನೇ ॥ ೨೪ ॥

ವಸುದೇವೋಽಪಿ ವಿನ್ಯಸ್ಯ ಬಾಲಮಾದಾಯ ದಾರಿಕಾಂ ।
ಯಶೋದಾಶಯನೇ ತೂರ್ಣಮಾಜಗಾಮಾಮಿತದ್ಯುತಿಃ ॥ ೨೫ ॥

ದದರ್ಶ ಚ ವಿಬುದ್ಧ್ವಾ ಸಾ ಯಶೋದಾ ಜಾತಮಾತ್ಮಜಂ ।
ನೀಲೋತ್ಪಲದಲಶ್ಯಾಮಂ ತತೋಽತ್ಯರ್ಥಂ ಮುದಂ ಯಯೌ ॥ ೨೬ ॥

---

೨೨. ಅತಿಗಂಭೀರವಾಗಿಯೂ, ಅನೇಕ ಸುಳಿಗಳಿಂದ ಕೂಡಿ ಹರಿಯುತ್ತಿರುವ ಯಮುನಾನದಿಯು ವಿಷ್ಣುವಿನ ಪ್ರಭಾವದಿಂದ ಮಂಡಿಯುದ್ದ ನೀರುಳ್ಳದ್ದಾಯಿತು. ಅದರಲ್ಲಿ ವಸುದೇವನು ವಿಷ್ಣುವನ್ನು ಹೊತ್ತುಕೊಂಡು ಹೊರಟನು.

೨೩. ಅದೇ ಸಮಯದಲ್ಲಿಯೇ ಕಂಸನಿಗೆ ಕಾಣಿಕೆಯನ್ನು ಒಪ್ಪಿಸಲು ನಂದಾದಿಗಳೂ, ಗೋಪವೃದ್ಧರೂ ಸಹ ಯಮುನಾನದಿಯ ಹತ್ತಿರ ಬರುತ್ತಿದ್ದರು. ಅವರನ್ನು ವಸುದೇವನು ನೋಡಿದನು.

೨೪. ಎಲೈ ಮುನಿಗಳೇ, ಅದೇ ಸಮಯದಲ್ಲಿಯೇ, ಯಶೋದೆಯು ಒಂದು ಹೆಣ್ಣುಮಗುವನ್ನು ಪ್ರಸವಿಸಿ ಯೋಗನಿದ್ರೆಯಿಂದ ಮೋಹಿತಳಾಗಿ ಮಲಗಿದ್ದಳು. ಅಲ್ಲಿನ ಜನಗಳೂ ಸಹ ಮೋಹಿತರಾಗಿ ನಿದ್ರಿಸುತ್ತಿದ್ದರು.

೨೫. ವಸುದೇವನು ಯಶೋದೆಯ ಹತ್ತಿರಕ್ಕೆ ಹೋಗಿ ಪುತ್ರನನ್ನು ಅಲ್ಲಿ ಮಲಗಿಸಿ, ಅತಿತೇಜಸ್ವಿನಿಯಾದ ಆ ಹೆಣ್ಣುಶಿಶುವನ್ನು ತೆಗೆದುಕೊಂಡು ಜಾಗ್ರತೆಯಾಗಿ ಹೊರಕ್ಕೆ ಬಂದನು.

೨೬. ಅನಂತರ ಯಶೋದೆಯು ಎಚ್ಚೆತ್ತು ತನಗೆ ಹುಟ್ಟಿರುವುದು

ಆದಾಯ ವಸುದೇವೋಽಪಿ ದಾರಿಕಾಂ ನಿಜಮನ್ದಿರಂ ।
ದೇವಕೀಶಯನೇ ನ್ಯಸ್ಯ ಯಥಾಪೂರ್ವಮತಿಷ್ಠತ ॥ ೨೭ ॥

ತತೋ ಬಾಲಧ್ವನಿಂ ಶ್ರುತ್ವಾ ರಕ್ಷಿಣಃ ಸಹಸೋತ್ಥಿತಾಃ ।
ಕಂಸಮಾವೇದಯಾಮಾಸುರ್ದೇವಕೀಪ್ರಸವಂ ದ್ವಿಜಾಃ ॥ ೨೮ ॥

ಕಂಸಸ್ತೂರ್ಣಮುಪೇತ್ಯೈನಾಂ ತತೋ ಜಗ್ರಾಹ ಬಾಲಿಕಾಂ ।
ಮುಂಚ ಮುಂಚೇತಿ ದೇವಕ್ಯಾ ಸನ್ನಕಂಠಂ ನಿವಾರಿತಃ ॥ ೨೯ ॥

ಚಿಕ್ಷೇಪ ಚ ಶಿಲಾಪೃಷ್ಠೇ ಸಾ ಕ್ಷಿಪ್ತಾ ವಿಯತಿ ಸ್ಥಿತಿಂ ।
ಅವಾಪ ರೂಪಂ ಚ ಮಹತ್ಸಾಯುಧಾಷ್ಟಮಹಾಭುಜಂ ।
ಪ್ರಜಹಾಸ ತಥೈವೋಚ್ಚೈಃ ಕಂಸಂ ಚ ರುಷಿತಾಬ್ರವೀತ್ ॥ ೩೦ ॥

---

ಗಂಡುಮಗುವೆಂದು ತಿಳಿದು ಕನ್ನೈದೆಲೆಯಂತೆ ನೀಲವಾದ ಶರೀರದಿಂದ ಪ್ರಕಾಶಿಸುತ್ತಿರುವ ಆ ಮಗುವನ್ನು ನೋಡಿ ಆನಂದಪಟ್ಟಳು.

೨೭. ವಸುದೇವನು ಆ ಸ್ತ್ರೀಶಿಶುವನ್ನು ತೆಗೆದುಕೊಂಡು ಬಂದು ದೇವಕಿಯ ಹಾಸಿಗೆಯಲ್ಲಿ ಮಲಗಿಸಿ ಸುಮ್ಮನಾದನು.

೨೮. ಮಗುವು ಅತ್ತುದ್ದನ್ನು ಕೇಳಿ ಕಾರಾಗಾರದ ಕಾವಲುಗಾರರು ಜಾಗ್ರತೆಯಾಗಿ ಎಚ್ಚೆತ್ತು ದೇವಕಿಯು ಹೆತ್ತಿರುವ ವಿಷಯವನ್ನು ಕಂಸನಿಗೆ ತಿಳಿಸಿದರು.

೨೯. ಕಂಸನು ಜಾಗ್ರತೆಯಾಗಿ ಬಂದು ಕೊಲ್ಲಲು ಆ ಸ್ತ್ರೀಶಿಶುವನ್ನು ಎತ್ತಿಕೊಂಡನು. ದೇವಕಿಯು 'ಬೇಡ ಬಿಡು' ಎಂಬುದಾಗಿ ಕೇಳುತ್ತಿದ್ದರೂ ಅದನ್ನು ಲಕ್ಷಿಸದೆ ಆ ಮಗುವನ್ನು ಎಳೆದುಕೊಂಡನು.

೩೦. ಅದನ್ನು ಕೊಲ್ಲಲು ಕಲ್ಲುಬಂಡೆಯಮೇಲೆ ಒಗೆಯುವುದಕ್ಕಾಗಿ ಕೈಯಿನಲ್ಲಿ ಹಿಡಿದು ಮೇಲಕ್ಕೆತ್ತಲು ಆ ಮಗುವು ಕಂಸನ ಕೈಯಿಂದ ತಪ್ಪಿಸಿಕೊಂಡು ಅಂತರಿಕ್ಷದಲ್ಲಿ ಹೋಗಿ ನಿಂತಿತು. ಎಂಟು ಕೈಗಳನ್ನೂ, ಕೈಗಳಲ್ಲೆಲ್ಲಾ ಮಹದಾಯುಧಗಳನ್ನು ಧರಿಸಿ ಗಟ್ಟಿಯಾಗಿ ನಗುತ್ತಾ ಅತಿಕೋಪದಿಂದ ಕಂಸನನ್ನು ಕುರಿತು,

॥ ಯೋಗಮಾಯೋವಾಚ ॥

ಕಿಂ ಮಯಾಕ್ಷಿಪ್ತಯಾ ಕಂಸ ಜಾತೋ ಯಸ್ತ್ವಾಂ ಹನಿಷ್ಯತಿ ।
ಸರ್ವಸ್ವಭೂತೋ ದೇವಾನಾಮಾಸೀನ್ಮೃತ್ಯುಃ ಪುರಾ ಸ ತೇ ।
ತದೇತತ್ಸಂಪ್ರಧಾರ್ಯಾಶು ಕ್ರಿಯತಾಂ ಹಿತಮಾತ್ಮನಃ ॥ ೩೧ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಪ್ರಯಯೌ ದೇವೀ ದಿವ್ಯಸ್ರಗ್ಗನ್ಧಭೂಷಣಾ ।
ಪಶ್ಯತೋ ಭೋಜರಾಜಸ್ಯ ಸ್ತುತಾ ಸಿದ್ಧೈರ್ವಿಹಾಯಸಾ ॥ ೩೨ ॥

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣೋತ್ಪತ್ತಿಕಥಾ-ನಿರೂಪಣಂ ನಾಮ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ**

---

೩೧. ಎಲೋ ಕಂಸ, ನನ್ನನ್ನು ಕೊಂದುದರಿಂದ ನಿನಗಾಗುವ ಪ್ರಯೋಜನವೇನು? ನಿನ್ನನ್ನು ಕೊಲ್ಲುವುದಕ್ಕೋಸ್ಕರವೇ ದೇವತೆಗಳಿಗೆ ಸರ್ವಸ್ವಭೂತನಾದ ಪರಮಾತ್ಮನು ಹುಟ್ಟಿ ಬೆಳೆಯುತ್ತಿರುವನು. ಹಿಂದಿನ ಜನ್ಮದಲ್ಲಿ ನಿನ್ನನ್ನು ಕೊಂದವನೂ ಆತನೇ. ಆದುದರಿಂದ ಈ ವಿಷಯವನ್ನು ಚೆನ್ನಾಗಿ ಆಲಿಸಿ ನಿನ್ನನ್ನು ಕಾಪಾಡಿಕೋ ಎಂದಿತು.

೩೨. ದಿವ್ಯವಾದ ಗಂಧಮಾಲ್ಯಾದಿಗಳಿಂದ ಭೂಷಿತಳಾದ ಆ ದೇವಿಯು ಈರೀತಿಯಾಗಿ ಹೇಳಿ, ಭೋಜರಾಜನು ನೋಡುತ್ತಿರಲು, ಸಿದ್ಧರೇ ಮೊದಲಾದವರು ಸ್ತುತಿಸುತ್ತಿರಲಾಗಿ ಅಲ್ಲಿಯೇ ಅಂತರ್ಧಾನಳಾದಳು.

ಶ್ರೀ ಬ್ರಹ್ಮಮಹಾಪುರಾಣದಲ್ಲಿ ಶ್ರೀಕೃಷ್ಣನ ಉತ್ಪತ್ತಿಕಥಾನಿರೂಪಣವೆಂಬ ನೂರೆಂಭತ್ತೆರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ತ್ರ್ಯಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಕಂಸಸ್ತ್ವಥೋದ್ವಿಗ್ನಮನಾಃ ಪ್ರಾಹ ಸರ್ವಾನ್ಮಹಾಸುರಾನ್ ।
ಪ್ರಲಂಬಕೇಶಿಪ್ರಮುಖಾನಾಹೂಯಾಸುರಪುಂಗವಾನ್ ॥ ೧ ॥

॥ ಕಂಸ ಉವಾಚ ॥

ಹೇ ಪ್ರಲಂಬ ಮಹಾಬಾಹೋ ಕೇಶಿನ್ಧೇನುಕ ಪೂತನೇ ।
ಅರಿಷ್ಟಾದ್ಯೈಸ್ತಥಾ ಚಾನ್ಯೈಃ ಶ್ರೂಯತಾಂ ವಚನಂ ಮಮ ॥ ೨ ॥

ಮಾಂ ಹಂತುಮಮರೈರ್ಯತ್ನಃ ಕೃತಃ ಕಿಲ ದುರಾತ್ಮಭಿಃ ।
ಮದ್ವೀರ್ಯತಾಪಿತಾನ್ವೀರಾನ್ನ ತ್ವೇತಾನ್ಗಣಯಾಮ್ಯಹಂ ॥ ೩ ॥

---

### ನೂರೆಂಭತ್ತಮೂರನೆಯ ಅಧ್ಯಾಯವು

೧. ವ್ಯಾಸನು ಹೇಳಿದನು :—ದುರ್ಗೆಯ ಮಾತಿನಿಂದ ಕಂಸನ ಮನಸ್ಸು ಉದ್ವಿಗ್ನವಾಯಿತು. ಆಗ ಕಂಸನು ಪ್ರಲಂಬ, ಕೇಶಿ ಮುಂತಾದ ಮಹಾಸುರರನ್ನೆಲ್ಲಾ ಕರೆದು ಇಂತು ನುಡಿದನು—

೨. ಎಲೈ, ಪ್ರಲಂಬನೇ, ಕೇಶೀ, ಧೇನುಕ, ಪೂತನೀ, ಅರಿಷ್ಟ ಮುಂತಾದ ರಾಕ್ಷಸಶ್ರೇಷ್ಠರೇ ನನ್ನ ಮಾತನ್ನು ಕೇಳಿರಿ.

೩. ಈಗ ದುಷ್ಟರಾದ ದೇವತೆಗಳು ನನ್ನನ್ನು ಕೊಲ್ಲಬೇಕೆಂದು ಪ್ರಯತ್ನಮಾಡುತ್ತಿರುವರು. ಆದರೆ ನನ್ನ ಪರಾಕ್ರಮದಿಂದ ಅವರೆಲ್ಲರೂ ಪೀಡಿತರಾಗಿರುವರು. ಇಂತಹ ದೇವತೆಗಳು ನನಗೆಷ್ಟರವರು.

**ಆಶ್ಚರ್ಯಂ ಕನ್ಯಯಾ ಚೋಕ್ತಂ ಜಾಯತೇ ದೈತ್ಯಪುಂಗವಾಃ ।**
**ಹಾಸ್ಯಂ ಮೇ ಜಾಯತೇ ವೀರಾಸ್ತೇಷು ಯತ್ನಪರೇಷ್ವಪಿ ॥ ೪ ॥**

**ತಥಾಪಿ ಖಲು ದುಷ್ಟಾನಾಂ ತೇಷಾಮಪ್ಯಧಿಕಂ ಮಯಾ ।**
**ಅಪಕಾರಾಯ ದೈತ್ಯೇಂದ್ರಾ ಯತನೀಯಂ ದುರಾತ್ಮನಾಂ ॥ ೫ ॥**

**ಉತ್ಪನ್ನಶ್ಚಾಪಿ ಮೃತ್ಯುರ್ಮೇ ಭೂತಭವ್ಯಭವತ್ಪ್ರಭುಃ ।**
**ಇತ್ಯೇತದ್ಬಾಲಿಕಾ ಪ್ರಾಹ ದೇವಕೀಗರ್ಭಸಂಭವಾ ॥ ೬ ॥**

**ತಸ್ಮಾದ್ಬಾಲೇಷು ಪರಮೋ ಯತ್ನಃ ಕಾರ್ಯೋ ಮಹೀತಲೇ ।**
**ಯತ್ರೋದ್ರಿಕ್ತಂ ಬಲಂ ಬಾಲೇ ಸ ಹಂತವ್ಯಃ ಪ್ರಯತ್ನತಃ ॥ ೭ ॥**

**॥ ವ್ಯಾಸ ಉವಾಚ ॥**

**ಇತ್ಯಾಜ್ಞಾಪ್ಯಾಸುರಾನ್ಕಂಸಃ ಪ್ರವಿಶ್ಯಾತ್ಮಗೃಹಂ ತತಃ ।**
**ಉವಾಚ ವಸುದೇವಂ ಚ ದೇವಕೀಮವಿರೋಧತಃ ॥ ೮ ॥**

---

೪. ಅಂದು ನಾನು ಕೊಲ್ಲಲು ಪ್ರಯತ್ನಪಟ್ಟ ಆ ಸ್ತ್ರೀಶಿಶುವು ಹೇಳಿದ ಮಾತನ್ನು ಕೇಳಿದರೆ ಬಹಳ ಆಶ್ಚರ್ಯವಾಗುತ್ತಿದೆ. ದೇವತೆಗಳು ನನ್ನನ್ನು ಕೊಲ್ಲಲು ಪ್ರಯತ್ನಪಡುತ್ತಿರುವರೆಂಬುದು ಅಪಹಾಸ್ಯಕರವಾದುದೇ ಸರಿ.

೫. ಆದರೂ ದುಷ್ಟರ ವಿಷಯದಲ್ಲಿ ಜಾಗರೂಕರಾಗಿರುವುದು ಒಳ್ಳೆಯದು. ಆದುದರಿಂದ ಆ ದೇವತೆಗಳಿಗೆ ನಾನು ಏನಾದರೂ ತೊಂದರೆ ಕೊಡಬೇಕು. ನೀವೂ ಆರೀತಿ ಮಾಡಿರಿ.

೬. ಭೂತಭಾವನನಾದ ಪರಮಾತ್ಮನು ಹುಟ್ಟಿರುವನಂತೆ. ಅವನಿಂದ ನನಗೆ ಮರಣವಂತೆ. ಈರೀತಿಯಾಗಿ ದೇವಕೀ ಗರ್ಭದಲ್ಲಿ ಹುಟ್ಟಿದ ಆ ಹೆಣ್ಣು ಮಗುವು ಹೇಳಿರುವುದು.

೭. ಆದುದರಿಂದ ಆ ಬಾಲಕನ ವಿಷಯದಲ್ಲಿ ನಾವು ತುಂಬಾ ಪ್ರಯತ್ನಪಟ್ಟು ಹುಟ್ಟಿರತಕ್ಕ ಆ ಬಾಲಕನನ್ನು ಬಾಲ್ಯದಲ್ಲಿಯೇ ಕೊಂದು ಹಾಕಬೇಕು ಎಂದನು.

೮. ಈರೀತಿ ರಾಕ್ಷಸರಿಗೆ ಅಪ್ಪಣೆಮಾಡಿ ಮನೆಯೊಳಕ್ಕೆ ಹೋದನು. ಅಲ್ಲಿ ದೇವಕೀ ವಸುದೇವರನ್ನು ಕುರಿತು ವಿನಯದಿಂದ—

॥ ಕಂಸ ಉವಾಚ ॥

ಯುವಯೋರ್ಘಾತಿತಾ ಗರ್ಭಾ ವ್ಯರ್ಥೈವೈತೇ ಮಯಾಧುನಾ ।
ಕೋಽಪ್ಯನ್ಯ ಏವ ನಾಶಾಯ ಬಾಲೋ ಮಮ ಸಮುದ್ಗತಃ ॥ ೯ ॥

ತದಲಂ ಪರಿತಾಪೇನ ನೂನಂ ಯದ್ಭಾವಿನೋ ಹಿ ತೇ ।
ಅರ್ಭಕಾ ಯುವಯೋಃ ಕೋ ವಾ ಆಯುಷೋಽಂತೇ ನ ಹನ್ಯತೇ ॥ ೧೦ ॥

॥ ವ್ಯಾಸ ಉವಾಚ ॥

ಇತ್ಯಾಶ್ವಾಸ್ಯ ವಿಮುಚ್ಯೈವ ಕಂಸಸ್ತೌ ಪರಿತೋಷ್ಯ ಚ ।
ಅಂತರ್ಗೃಹಂ ದ್ವಿಜಶ್ರೇಷ್ಠಾಃ ಪ್ರವಿವೇಶ ಪುನಃ ಸ್ವಕಂ ॥ ೧೧ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಬಾಲಚರಿತೇ
ಕಂಸವಿಚಾರಕಥನಂ ನಾಮ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ

---

೯-೧೦. ನಾನು ಅನ್ಯಾಯವಾಗಿ ನಿಮ್ಮ ಗರ್ಭವನ್ನೆಲ್ಲಾ ನಾಶಮಾಡಿದೆನು. ಈಗ ಮತ್ತೊಬ್ಬ ಬಾಲಕನನ್ನು ನಾಶಮಾಡಲು ಪ್ರಯತ್ನಮಾಡುತ್ತಿರುವೆನು. ಆದುದರಿಂದ ನೀವೇನೂ ದುಃಖಪಡಬೇಡಿರಿ. ಏನೋ ಆದದ್ದು ಆಗಿಹೋಯಿತು. ಇನ್ನುಮುಂದೆ ನಿಮ್ಮ ಆಯಸ್ಸಿರುವವರೆಗೂ ನಿಮಗೆ ಹುಟ್ಟುವ ಯಾವ ಮಕ್ಕಳನ್ನೂ ಕೊಲ್ಲುವುದಿಲ್ಲ ಎಂದನು.

೧೧. ಈರೀತಿಯಾಗಿ ಕಂಸನು ದೇವಕೀವಸುದೇವರನ್ನು ಸಮಾಧಾನ ಮಾಡಿ, ಸಂತೋಷಪಡಿಸಿ ತನ್ನ ಮನೆಯೊಳಕ್ಕೆ ಹೊರಟುಹೋದನು.

ಶ್ರೀ ಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣನ ಬಾಲಚರಿತೆಯಲ್ಲಿ
ಕಂಸವಿಚಾರಕಥನವೆಂಬ ನೂರೆಂಭತ್ತಮೂರನೆಯ
ಅಧ್ಯಾಯವು ಮುಗಿದುದು.

---

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಚತುರಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ವಿಮುಕ್ತೋ ವಸುದೇವೋಽಪಿ ನಂದಸ್ಯ ಶಕಟಂ ಗತಃ ।
ಪ್ರಹೃಷ್ಟಂ ದೃಷ್ಟವಾನ್ನಂದಂ ಪುತ್ರೋ ಜಾತೋ ಮಮೇತಿ ವೈ ॥ ೧ ॥

ವಸುದೇವೋಽಪಿ ತಂ ಪ್ರಾಹ ದಿಷ್ಟ್ಯಾ ದಿಷ್ಟ್ಯೇತಿ ಸಾದರಂ ।
ವಾರ್ಧಕೇಽಪಿ ಸಮುತ್ಪನ್ನಸ್ತನಯೋಽಯಂ ತವಾಧುನಾ ॥ ೨ ॥

ದತ್ತೋ ಹಿ ವಾರ್ಷಿಕಃ ಸರ್ವೋ ಭವದ್ಭಿರ್ನೃಪತೇಃ ಕರಃ ।
ಯದರ್ಥಮಾಗತಸ್ತಸ್ಮಾನ್ನಾತ್ರ ಸ್ಥೇಯಂ ಮಹಾತ್ಮನಾ ॥ ೩ ॥

### ನೂರೆಂಭತ್ತನಾಲ್ಕನೆಯ ಅಧ್ಯಾಯವು

೧-೨. ವ್ಯಾಸನು ಹೇಳಿದನು ;—ವಸುದೇವನು ಕಂಸನಿಂದ ಬಿಡುಗಡೆಯನ್ನು ಹೊಂದಿ ನಂದನ ಮನೆಗೆ ಹೋದನು. ನಂದನು ವಸುದೇವನನ್ನು ನೋಡಿ ' ನನಗೆ ಗಂಡುಮಗುವಾಯಿತೆಂದು ಸಂತೋಷದಿಂದ ಅವನಿಗೆ ತಿಳಿಸಿದನು. ವಸುದೇವನೂ ಕೂಡ ' ನಿನಗೆ ಈ ವಾರ್ಧಿಕವಯಸ್ಸಿನಲ್ಲಿ ಮಗುವಾಯಿತಲ್ಲಾ. ಬಹಳ ಸಂತೋಷ. ನೀನು ಒಳ್ಳೆಯ ಅದೃಷ್ಟವಂತ ' ಎಂಬುದಾಗಿ ಆದರದಿಂದ ಮಾತನಾಡಿ ಅವನನ್ನು ಸಂತೋಷಪಡಿಸಿದನು.

೩-೪. ಮತ್ತು ಎಲೈ ನಂದನೇ, ಕಂಸನಿಗೆ ಅರ್ಪಿಸಬೇಕಾದ ವರ್ಷದ ಕಪ್ಪಕಾಣಿಕೆಗಳನ್ನೆಲ್ಲಾ ಅರ್ಪಿಸಿರುವಿರಿ. ನೀವು ಬಂದ ಕೆಲಸವು ನೆರವೇರಿ

ಯದರ್ಥಮಾಗತಃ ಕಾರ್ಯಂ ತನ್ನಿಷ್ಪನ್ನಂ ಕಿಮಾಸ್ಯತೇ ।
ಭವದ್ಭಿರ್ಗಮ್ಯತಾಂ ನನ್ದ ತಚ್ಛೀಘ್ರಂ ನಿಜಗೋಕುಲಂ ॥ ೪ ॥

ಮಮಾಪಿ ಬಾಲಕಸ್ತತ್ರ ರೋಹಿಣೀಪ್ರಸವೋ ಹಿ ಯಃ ।
ಸ ರಕ್ಷಣೀಯೋ ಭವತಾ ಯಥಾಯಂ ತನಯೋ ನಿಜಃ ॥ ೫ ॥

॥ ವ್ಯಾಸ ಉವಾಚ ॥

ಇತ್ಯುಕ್ತಾಃ ಪ್ರಯಯುರ್ಗೋಪಾ ನನ್ದಗೋಪಪುರೋಗಮಾಃ ।
ಶಕಟಾರೋಪಿತೈರ್ಭಾಂಡೈಃ ಕರಂ ದತ್ವಾ ಮಹಾಬಲಾಃ ॥ ೬ ॥

ವಸತಾಂ ಗೋಕುಲೇ ತೇಷಾಂ ಪೂತನಾ ಬಾಲಘಾತಿನೀ ।
ಸುಪ್ತಂ ಕೃಷ್ಣಮುಪಾದಾಯ ರಾತ್ರೌ ಚ ಪ್ರದದೌ ಸ್ತನಂ ॥ ೭ ॥

ಯಸ್ಮೈ ಯಸ್ಮೈ ಸ್ತನಂ ರಾತ್ರೌ ಪೂತನಾ ಸಂಪ್ರಯಚ್ಛತಿ ।
ತಸ್ಯ ತಸ್ಯ ಕ್ಷಣೇನಾಂಗಂ ಬಾಲಕಸ್ಯೋಪಹನ್ಯತೇ ॥ ೮ ॥

---

ದ್ದಾಯಿತು. ಇನ್ನು ಇಲ್ಲೇಕಿರುವಿರಿ? ಆದುವರಿಂದ ಜಾಗ್ರತೆಯಾಗಿ ನೀವೆಲ್ಲರೂ ನಿಮ್ಮ ಗೋಕುಲಕ್ಕೆ ತೆರಳಿರಿ.

೫. ಗೋಕುಲದಲ್ಲಿ ರೋಹಿಣಿಯಲ್ಲಿ ನನಗೊಬ್ಬ ಪುತ್ರನು ಜನಿಸಿರುವನು. ನೀವು ಅಲ್ಲಿಗೆ ಹೋದವರು ಆ ಮಗುವನ್ನು ನಿಮ್ಮ ಮಗನಂತೆ ಭಾವಿಸಿ ರಕ್ಷಿಸಬೇಕು. ಎಂದನು.

೬. ವಸುದೇವನು ಈರೀತಿಯಾಗಿ ಹೇಳಲು ನಂದಗೋಪನೇ ಮೊದಲಾದ ಗೋಪರೆಲ್ಲರೂ ಕಂಸನಿಗೆ ಕಪ್ಪಕಾಣಿಕೆಗಳನ್ನು ಅರ್ಪಿಸಿ ತಂದಿದ್ದ ಭಾಂಡಗಳನ್ನೆಲ್ಲಾ ಗಾಡಿಗಳಮೇಲೆ ಹಾಕಿಕೊಂಡು ಅಲ್ಲಿಂದ ಹೊರಟರು.

೭. ಕಂಸನ ಪ್ರೇರಣೆಯಂತೆ ಪೂತನಿ ಎಂಬುವಳು ಗೋಕುಲದಲ್ಲಿ ಬೆಳೆಯುತ್ತಿದ್ದ ಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಮಲಗಿ ನಿದ್ರಿಸುತ್ತಿರುವ ಕೃಷ್ಣನಿಗೆ ರಾತ್ರಿಯಲ್ಲಿ ಸ್ತನ್ಯಪಾನವನ್ನು ಮಾಡಿಸಿದಳು.

೮. ಆ ಪೂತನಿಯ ಸ್ವಭಾವವೇನೆಂದರೆ ರಾತ್ರಿಯಲ್ಲಿ ಅವಳು ಯಾವ ಯಾವ ಮಕ್ಕಳಿಗೆ ಸ್ತನ್ಯಪಾನಮಾಡಿಸುವಳೋ ಆಕ್ಷಣದಲ್ಲಿಯೇ ಆ ಮಕ್ಕಳ ಅಂಗಾಂಗಗಳೆಲ್ಲವೂ ಕ್ಷೀಣವಾಗುವುವು.

**ಕೃಷ್ಣಸ್ತಸ್ಯಾಃ ಸ್ತನಂ-ಗಾಢಂ ಕರಾಭ್ಯಾಮತಿಪೀಡಿತಂ ।**
**ಗೃಹೀತ್ವಾ ಪ್ರಾಣಸಹಿತಂ ಪಪೌ ಕ್ರೋಧಸಮನ್ವಿತಃ ॥ ೯ ॥**

**ಸಾ ವಿಮುಕ್ತಮಹಾರಾವಾ ವಿಚ್ಛಿನ್ನಸ್ನಾಯುಬಂಧನಾ ।**
**ಪಪಾತ ಪೂತನಾ ಭೂಮೌ ಮ್ರಿಯಮಾಣಾತಿಭೀಷಣಾ ॥ ೧೦ ॥**

**ತನ್ನಾದಶ್ರುತಿಸಂತ್ರಾಸಾದ್ವಿಬುದ್ಧಾಸ್ತೇ ವ್ರಜೌಕಸಃ ।**
**ದದೃಶುಃ ಪೂತನೋತ್ಸಂಗೇ ಕೃಷ್ಣಂ ತಾಂ ಚ ನಿಪಾತಿತಾಂ ॥ ೧೧ ॥**

**ಆದಾಯ ಕೃಷ್ಣಂ ಸಂತ್ರಸ್ತಾ ಯಶೋದಾ ಚ ತತೋ ದ್ವಿಜಾಃ ।**
**ಗೋಪುಚ್ಛಭ್ರಾಮಣಾದ್ಯೈಶ್ಚ ಬಾಲದೋಷಮಪಾಕರೋತ್ ॥ ೧೨ ॥**

**ಗೋಪುರೀಷಮುಪಾದಾಯ ನನ್ದಗೋಪೋಽಪಿ ಮಸ್ತಕೇ ।**
**ಕೃಷ್ಣಸ್ಯ ಪ್ರದದೌ ರಕ್ಷಾಂ ಕುರ್ವನ್ನಿದಮುದೈರಯತ್ ॥ ೧೩ ॥**

---

೯. ಕೃಷ್ಣನು ಪೂತನಿಯ ಸ್ತನಗಳನ್ನು ತನ್ನ ಕೈಗಳಿಂದ ಬಲವಾಗಿ ಹಿಸುಕಿದನು. ಮತ್ತು ಕ್ರೋಧದಿಂದ ಅವಳ ಸ್ತನ್ಯಗಳನ್ನು ಪ್ರಾಣಸಹಿತ ವಾಗಿ ಕುಡಿದನು.

೧೦. ಆಗ ಅವಳು ಗಟ್ಟಿಯಾಗಿ ಕಿರಿಚುತ್ತಾ ಕೀಲು ಬಂಧಗಳೆಲ್ಲವೂ ಚೂರುಚೂರಾಗಲು ಅತಿಭಯಂಕರಾಕಾರಳಾಗಿ ಭೂಮಿಯಲ್ಲಿ ಉರುಳಿದಳು.

೧೧. ಅವಳ ಭಯಂಕರ ಶಬ್ದವನ್ನು ಕೇಳಿ ಆ ಊರಿನವರೆಲ್ಲರೂ ಎಚ್ಚೆತ್ತರು. ಮತ್ತು ಜಾಗ್ರತೆಯಾಗಿ ಬಂದು ಕೆಳಗೆ ಪೂತನಿಯು ಬಿದ್ದಿರುವುದನ್ನೂ ಅವಳ ತೊಡೆಯಮೇಲೆ ಕೃಷ್ಣನು ಇರುವುದನ್ನೂ ಸಹ ನೋಡಿದರು.

೧೨-೧೩. ಯಶೋದೆಯು ಬೇಗನೆ ಕೃಷ್ಣನನ್ನು ಎತ್ತಿಕೊಂಡು ಹಸುವಿನ ಬಾಲವನ್ನು ನೀವಳಿಸಿ ಮಗುವಿಗೆ ಆದ ದೋಷವನ್ನು ಹೋಗಲಾಡಿಸಿದಳು. ನಂದಗೋಪನೂ ಹಸುವಿನ ಸಗಣಿಯನ್ನು ತಂದು ಆ ಮಗುವಿನ ತಲೆಯ ಮೇಲಿಟ್ಟು ನೀವಳಿಸಿ ರಕ್ಷೆಯನ್ನು ಮಾಡಿದನು. ಆ ಸಮಯದಲ್ಲಿ ನಂದ ಗೋಪನು ಹೀಗೆ ಹೇಳಿದನು.—

॥ ನನ್ದಗೋಪ ಉವಾಚ ॥

ರಕ್ಷತು ತ್ವಾಮಶೇಷಾಣಾಂ ಭೂತಾನಾಂ ಪ್ರಭವೋ ಹರಿಃ ।
ಯಸ್ಯ ನಾಭಿಸಮುದ್ಭೂತಾತ್ಪಂಕಜಾದಭವಜ್ಜಗತ್ ॥ ೧೪ ॥

ಯೇನ ದಂಷ್ಟ್ರಾಗ್ರವಿಧೃತಾ ಧಾರಯತ್ಯವನೀ ಜಗತ್ ।
ವರಾಹರೂಪಧೃಗ್ದೇವಃ ಸ ತ್ವಾಂ ರಕ್ಷತು ಕೇಶವಃ ॥ ೧೫ ॥

ಗುಹ್ಯಂ ಸ ಜಠರಂ ವಿಷ್ಣುರ್ಜಂಘೌ ಪಾದೌ ಜನಾರ್ದನಃ ।
ವಾಮನೋ ರಕ್ಷತು ಸದಾ ಭವಂತಂ ಯಃ ಕ್ಷಣಾದಭೂತ್ ॥ ೧೬ ॥

ತ್ರಿವಿಕ್ರಮಕ್ರಮಾಕ್ರಾಂತತ್ರೈಲೋಕ್ಯಸ್ಫುರದಾಯುಧಃ ।
ಶಿರಸ್ತೇ ಪಾತು ಗೋವಿಂದಃ ಕಂಠಂ ರಕ್ಷತು ಕೇಶವಃ ॥ ೧೭ ॥

ಮುಖಬಾಹೂ ಪ್ರಬಾಹೂ ಚ ಮನಃ ಸರ್ವೇನ್ದ್ರಿಯಾಣಿ ಚ ।
ರಕ್ಷತ್ತ್ವವ್ಯಾಹತೈಶ್ವರ್ಯಸ್ತವ ನಾರಾಯಣೋಽವ್ಯಯಃ ॥ ೧೮ ॥

---

೧೪. ಸಮಸ್ತ ಪ್ರಾಣಿಗಳಿಗೂ ಒಡೆಯನಾದ ಪರಮಾತ್ಮನು ನಿನ್ನನ್ನು ಕಾಪಾಡಲಿ. ಯಾವನ ನಾಭಿಕಮಲದಿಂದ ಪ್ರಪಂಚವು ಹುಟ್ಟಿತೋ ಆ ಹರಿಯು ನಿನ್ನನ್ನು ಕಾಪಾಡಲಿ.

೧೫. ವರಾಹರೂಪವನ್ನು ಧರಿಸಿ ಕೋರೆದಾಡೆಯ ತುದಿಯಿಂದ ಸಮುದ್ರದಲ್ಲಿ ಮುಳಿಗಿದ್ದ ಪೃಥ್ವಿಯನ್ನು ಉದ್ಧಾರಮಾಡಿದ ಆ ವರಾಹಮೂರ್ತಿಯು ನಿನ್ನನ್ನು ಕಾಪಾಡಲಿ.

೧೬. ನಿನ್ನ ಗುಹ್ಯಸ್ಥಾನವನ್ನೂ, ಉದರವನ್ನೂ ವಿಷ್ಣುವೂ, ನಿನ್ನ ಪಾದಗಳನ್ನು ಜನಾರ್ದನನೂ, ನಿನ್ನನ್ನು ಸರ್ವದಾ ವಾಮನಮೂರ್ತಿಯೂ ರಕ್ಷಿಸಲಿ.

೧೭. ತ್ರಿವಿಕ್ರಮಾವತಾರವನ್ನು ಮಾಡಿ ವಿವಿಧವಾದ ಆಯುಧಗಳಿಂದ ಪ್ರಕಾಶಿಸುತ್ತಿದ್ದ ಆ ಗೋವಿಂದನು ನಿನ್ನ ಶಿರಸ್ಸನ್ನೂ ಕೇಶವನು ನಿನ್ನ ಕಂಠವನ್ನೂ ರಕ್ಷಿಸಲಿ.

೧೮. ಮುಖವನ್ನೂ, ಬಾಹುಗಳನ್ನೂ, ತೋಳುಗಳನ್ನೂ, ಮನಸ್ಸನ್ನೂ,

ತ್ವಾಂ ದಿಕ್ಷು ಪಾತು ವೈಕುಂಠೋ ವಿದಿಕ್ಷು ಮಧುಸೂದನಃ ।
ಹೃಷೀಕೇಶೋಽಂಬರೇ ಭೂಮೌ ರಕ್ಷತು ತ್ವಾಂ ಮಹೀಧರಃ ॥ ೧೯ ॥

॥ ವ್ಯಾಸ ಉವಾಚ ॥

ಏವಂ ಕೃತಸ್ವಸ್ತ್ಯಯನೋ ನಂದಗೋಪೇನ ಬಾಲಕಃ ।
ಶಾಯಿತಃ ಶಕಟಸ್ಯಾಧೋ ಬಾಲಪರ್ಯಂಕಿಕಾತಲೇ ॥ ೨೦ ॥

ತೇ ಚ ಗೋಪಾ ಮಹದ್ದೃಷ್ಟ್ವಾ ಪೂತನಾಯಾಃ ಕಲೇವರಂ ।
ಮೃತಾಯಾಃ ಪರಮಂ ತ್ರಾಸಂ ವಿಸ್ಮಯಂ ಚ ತದಾ ಯಯುಃ ॥ ೨೧ ॥

ಕದಾಚಿಚ್ಛಕಟಸ್ಯಾಧಃ ಶಯಾನೋ ಮಧುಸೂದನಃ ।
ಚಿಕ್ಷೇಪ ಚರಣಾವೂರ್ಧ್ವಂ ಸ್ತನಾರ್ಥೀ ಪ್ರರುರೋದ ಚ ॥ ೨೨ ॥

---

ಸರ್ವೇಂದ್ರಿಯಗಳನ್ನೂ ನಾಶರಹಿತನಾದ ಆ ನಾರಾಯಣನು ಸ್ವಲ್ಪವೂ ಕುಂದು ಬರದಂತೆ ಕಾಪಾಡಲಿ.

೧೯. ದಿಕ್ಕುಗಳಲ್ಲಿ ನಿನ್ನನ್ನು ವೈಕುಂಠನೂ, ವಿದಿಕ್ಕುಗಳಲ್ಲಿ ಮಧುಸೂದನನೂ, ಅಂತರಿಕ್ಷದಲ್ಲಿ ಹೃಷೀಕೇಶನೂ, ಭೂಮಿಯಲ್ಲಿ ನಾರಾಯಣನೂ ಕಾಪಾಡಲಿ. ಎಂದನು.

೨೦. ಈರೀತಿಯಾಗಿ ನಂದಗೋಪನು ಬಾಲಕನಾದ ಕೃಷ್ಣನಿಗೆ ಮಂಗಳ ಕಾರ್ಯವನ್ನು ಮಾಡಿ ಆ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿದನು.

೨೧. ಅಲ್ಲಿಗೆ ಬಂದಿದ್ದ ಗೋಪರೆಲ್ಲರೂ ದೊಡ್ಡದಾದ ಪೂತನಿಯ ಶರೀರವನ್ನೂ ಅವಳು ಮೃತಳಾಗಿ ಬಿದ್ದಿರುವುದನ್ನೂ ನೋಡಿ ಬಹಳ ಭಯಗೊಂಡವರಾಗಿ ಆಶ್ಚರ್ಯಪಡುತ್ತಾ ಅಲ್ಲಿಂದ ಹೊರಟುಹೋದರು.

೨೨. ಒಂದು ದಿನ ಕೃಷ್ಣನನ್ನು ಒಂದು ಗಾಡಿಯ ಕೆಳಗಡೆ ಮಲಗಿಸಿದ್ದರು. ಆಗ ಕೃಷ್ಣನು ಹಸಿವಿನಿಂದ ಹಾಲುಕುಡಿಯಲು ತನ್ನ ಕಾಲುಗಳನ್ನು ಮೇಲಕ್ಕೆತ್ತಿಕೊಂಡು ಗಟ್ಟಿಯಾಗಿ ಅಳಲು ಪ್ರಾರಂಭಿಸಿದನು.

ತಸ್ಯ ಪಾದಪ್ರಹಾರೇಣ ಶಕಟಂ ಪರಿವರ್ತಿತಂ ।
ವಿಧ್ವಸ್ತಭಾಂಡಕುಂಭಂ ತದ್ವಿಪರೀತಂ ಪಪಾತ ವೈ ॥ ೨೩ ॥

ತತೋ ಹಾಹಾಕೃತಃ ಸರ್ವೋ ಗೋಪಗೋಪೀಜನೋ ದ್ವಿಜಾಃ ।
ಆಜಗಾಮ ತದಾ ಜ್ಞಾತ್ವಾ ಬಾಲಮುತ್ತಾನಶಾಯಿನಂ ॥ ೨೪ ॥

ಗೋಪಾಃ ಕೇನೇತಿ ಜಗದುಃ ಶಕಟಂ ಪರಿವರ್ತಿತಂ ।
ತತ್ರೈವ ಬಾಲಕಾಃ ಪ್ರೋಚುರ್ಬಾಲೇನಾನೇನ ಪಾತಿತಂ ॥೨೫ ॥

ರುದತಾ ದೃಷ್ಟಮಸ್ಮಾಭಿಃ ಪಾದವಿಕ್ಷೇಪತಾಡಿತಂ ।
ಶಕಟಂ ಪರಿವೃತ್ತಂ ವೈ ನೈತದನ್ಯಸ್ಯ ಚೇಷ್ಟಿತಂ ॥ ೨೬ ॥

ತತಃ ಪುನರತೀವಾಸನ್ ಗೋಪಾ ವಿಸ್ಮಿತಚೇತಸಃ ।
ನಂದಗೋಪೋಽಪಿ ಜಗ್ರಾಹ ಬಾಲಮತ್ಯಂತವಿಸ್ಮಿತಃ ॥ ೨೭ ॥

---

೨೩. ಕಾಲುಗಳನ್ನು ಎತ್ತಿದಾಗ ಅವು ಗಾಡಿಗೆ ತಗುಲಿತು. ಅವುಗಳ ಏಟಿನಿಂದ ಗಾಡಿಯು ತಿರುಗಿತು. ಅದರ ಮೇಲಿರುವ ಮಡಿಕೆಗಡಿಗೆಗಳು ಕೆಳಗುರುಳಿದವು. ಗಾಡಿಯು ಬಿದ್ದುಬಿಟ್ಟಿತು.

೨೪-೨೫. ಆಗ ಗೋಪಗೋಪಿಯರೆಲ್ಲರೂ ಹಾಹಾಕಾರ ಮಾಡುತ್ತಾ ಅಲ್ಲಿಗೆ ಓಡಿಬಂದರು. ಶ್ರೀಕೃಷ್ಣನು ಮೇಲ್ಮುಖನಾಗಿ ಸುಖವಾಗಿಯೇ ಮಲಗಿದ್ದನು. ಗೋಪರೆಲ್ಲರೂ ಈ ಗಾಡಿಯನ್ನು ಕೆಡವಿದವರು ಯಾರೆಂದು ಕೇಳಲು ಅಲ್ಲಿದ್ದ ಹುಡುಗರು ಈ ಮಗುವೇ ಕೆಡವಿತು ಎಂದು ಹೇಳಿದರು.

೨೬. ಮತ್ತು ಮಗುವು ಅಳುತ್ತಿರುವಾಗ ಅದರ ಕಾಲುಗಳು ಗಾಡಿಗೆ ತಗುಲಲು ಅದರ ಏಟಿನಿಂದ ಗಾಡಿಯು ಬಿದ್ದಿತು. ಇದನ್ನು ನಾವು ಸ್ವತಃ ನೋಡಿದೆವು. ಮತ್ತೆ ಯಾರೂ ಇದನ್ನು ಕೆಡವಲು ಬಂದಿಲ್ಲ. ಎಂದರು.

೨೭. ಇದರಿಂದ ಎಲ್ಲರಿಗೂ ಬಹಳ ಆಶ್ಚರ್ಯವಾಯಿತು. ನಂದಗೋಪನು ಅತಿವಿಸ್ಮಯದಿಂದ ಬಾಲಕನನ್ನು ಎತ್ತಿಕೊಂಡನು.

ಯಶೋದಾ ವಿಸ್ಮಯಾರೂಢಾ ಭಗ್ನಭಾಂಡಕಪಾಲಕಂ ।
ಶಕಟಂ ಚಾರ್ಚಯಾಮಾಸ ದಧಿಪುಷ್ಪಫಲಾಕ್ಷತೈಃ ॥ ೨೮ ॥

ಗರ್ಗಶ್ಚ ಗೋಕುಲೇ ತತ್ರ ವಸುದೇವಪ್ರಚೋದಿತಃ ।
ಪ್ರಚ್ಛನ್ನ ಏವ ಗೋಪಾನಾಂ ಸಂಸ್ಕಾರಮಕರೋತ್ತಯೋಃ ॥ ೨೯ ॥

ಜ್ಯೇಷ್ಠಂ ಚ ರಾಮಮಿತ್ಯಾಹ ಕೃಷ್ಣಂ ಚೈವ ತಥಾಪರಂ ।
ಗರ್ಗೋ ಮತಿಮತಾಂ ಶ್ರೇಷ್ಠೋ ನಾಮ ಕುರ್ವನ್ಮಹಾಮತಿಃ ॥ ೩೦ ॥

ಅಲ್ಪೇನೈವ ಹಿ ಕಾಲೇನ ವಿಜ್ಞಾತೌ ತೌ ಮಹಾಬಲೌ ।
ಘೃಷ್ಟಜಾನುಕರೌ ವಿಪ್ರಾ ಬಭೂವತುರುಭಾವಪಿ ॥ ೩೧ ॥

ಕರೀಷಭಸ್ಮದಿಗ್ಧಾಂಗೌ ಭ್ರಮಮಾಣಾವಿತಸ್ತತಃ ।
ನ ನಿವಾರಯಿತುಂ ಶಕ್ತಾ ಯಶೋದಾ ತೌ ನ ರೋಹಿಣೀ । ॥ ೩೨ ॥

---

೨೮. ಯಶೋದೆಗೂ ಬಹಳ ಆಶ್ಚರ್ಯವಾಯಿತು. ಗಡಿಗೆಮಡಿಕೆಗಳೆಲ್ಲಾ ಒಡೆದುಹೋದುದರಿಂದ ಆ ಗಾಡಿಯನ್ನು ಮಸರು, ಹೂವು, ಹಣ್ಣು, ಅಕ್ಷತೆ ಇವುಗಳಿಂದ ಪೂಜಿಸಿದಳು.

೨೯. ಗೋಕುಲದಲ್ಲಿ ಗೋಪರ ಗುರುವಾದ ಗರ್ಗನು ವಸುದೇವನ ಮಾತಿನಂತೆ ಆ ಮಗುವಿಗೂ, ರೋಹಿಣಿಯ ಮಗುವಿಗೂ ಗುಟ್ಟಾಗಿ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿದನು.

೩೦. ಮಹಾಜ್ಞಾನಿಯಾದ ಆ ಗರ್ಗನು ಜ್ಯೇಷ್ಠಪುತ್ರನಿಗೆ ರಾಮನೆಂತಲೂ, ಚಿಕ್ಕವನಿಗೆ ಕೃಷ್ಣನೆಂತಲೂ ನಾಮಕರಣವನ್ನು ಮಾಡಿದನು.

೩೧. ಸ್ವಲ್ಪಕಾಲದಲ್ಲಿಯೇ ಆ ರಾಮಕೃಷ್ಣರು ಅತ್ಯಂತ ಬಲಶಾಲಿಗಳಾದರು. ಅವರ ಕೈಕಾಲುಗಳು ಧಷ್ಟಪುಷ್ಟವಾಗಿ ಇದ್ದವು. ಇದರಿಂದ ಇಬ್ಬರೂ ಶೋಭಿಸುತ್ತಿದ್ದರು.

೩೨. ಮೈಗೆಲ್ಲಾ ವಿಭೂತಿಯನ್ನು ಬಳಿದುಕೊಂಡು ಬೀದಿಯಲ್ಲೆಲ್ಲಾ ಸ್ವೇಚ್ಛೆಯಾಗಿ ತಿರುಗುವರು. ಆದರೆ ಅವರ ಸ್ವೇಚ್ಛಾವಿಹಾರವನ್ನು ಯಶೋದೆಯಾಗಲೀ, ರೋಹಿಣಿಯಾಗಲೀ ತಡೆಯಲು ಶಕ್ತರಾಗಿರಲಿಲ್ಲ.

ಗೋವಾಟಮಧ್ಯೇ ಕ್ರೀಡಂತೌ ವತ್ಸವಾಟಗತೌ ಪುನಃ ।
ತದಹರ್ಜಾತಗೋವತ್ಸಪುಚ್ಛಾಕರ್ಷಣತತ್ಪರೌ ॥ ೩೩ ॥

ಯದಾ ಯಶೋದಾ ತೌ ಬಾಲಾವೇಕಸ್ಥಾನಚರಾವುಭೌ ।
ಶಶಾಕ ನೋ ವಾರಯಿತುಂ ಕ್ರೀಡಂತಾವತಿಚಂಚಲೌ ॥ ೩೪ ॥

ದಾಮ್ನಾ ಬಧ್ವಾ ತದಾ ಮಧ್ಯೇ ನಿಬಬಂಧ ಉಲೂಖಲೇ ।
ಕೃಷ್ಣಮಕ್ಲಿಷ್ಟಕರ್ಮಾಣಮಾಹ ಚೇದಮಮರ್ಷಿತಾ ॥ ೩೫ ॥

॥ ಯಶೋದೋವಾಚ ॥

ಯದಿ ಶಕ್ತೋಽಸಿ ಗಚ್ಛ ತ್ವಮಿತಿಚಂಚಲಚೇಷ್ಟಿತ ॥ ೩೬ ॥

॥ ವ್ಯಾಸ ಉವಾಚ

ಇತ್ಯುಕ್ತ್ವಾ ಚ ನಿಜಂ ಕರ್ಮ ಸಾ ಚಕಾರ ಕುಟುಂಬಿನೀ ।
ವ್ಯಗ್ರಾಯಾಮಥ ತಸ್ಯಾಂ ಸ ಕರ್ಷಮಾಣ ಉಲೂಖಲಂ ॥ ೩೭ ॥

---

೩೩. ಹಸುಗಳ ಗುಂಪಿನಲ್ಲಿ ಆಟವಾಡುತ್ತಾ ಆ ರಾಮಕೃಷ್ಣರು ಕೊಟ್ಟಿಗೆಗೆ ನುಗ್ಗಿ ಅಲ್ಲಿರುವ ಕರುಗಳ ಬಾಲಗಳನ್ನು ಹಿಡಿದೆಳೆಯುತ್ತಾ ಆಟವಾಡುತ್ತಿದ್ದರು.

೩೪–೩೫. ಒಂದುದಿನ ಆ ರಾಮಕೃಷ್ಣರು ಬಹಳ ತುಂಟತನದಿಂದ ಆಟವಾಡುತ್ತಿರಲು ಯಶೋದೆಯು ಅವರನ್ನು ತಡೆದಳು. ಅವರು ಅವಳ ಮಾತನ್ನು ಕೇಳದೆ ಹಾಗೆಯೇ ಆಡುತ್ತಿದ್ದರು. ಆಗ ಯಶೋದೆಯು ಸಿಟ್ಟಿನಿಂದ ಬಲುತುಂಟನಾದ ಕೃಷ್ಣನನ್ನು ಹಗ್ಗದಲ್ಲಿ ಬಿಗಿದು ಒಂದು ಕಡವೋಡಿಗೆ ಕಟ್ಟಿ ಹಾಕಿದಳು. ಆಗ ಅತಿಕೋಪದಿಂದ ಅವನನ್ನು ಕುರಿತು

೩೬. ಎಲೋ ತುಂಟ, ಈಗ ನಿನಗೆ ಶಕ್ತಿಯಿದ್ದ ಪಕ್ಷದಲ್ಲಿ ಬಿಡಿಸಿಕೊಂಡು ಹೋಗು. ನೋಡೋಣ. ಎಂದಳು.

೩೭. ಯಶೋದೆಯು ಈರೀತಿ ಹೇಳಿ ತನ್ನ ಮನೆಕೆಲಸಕ್ಕೆ ಹೊರಟು ಹೋದಳು. ಕೃಷ್ಣನಕಡೆಗೆ ಬಹಳಹೊತ್ತಿನವರೆಗೂ ಗಮನವನ್ನು ಕೊಡಲಿಲ್ಲ. ಆಗ ಅವನು ಆ ಕಡವೋಡನ್ನು ಎಳೆದುಕೊಂಡೇ ಹೊರಟನು.

ಯಮಲಾರ್ಜುನಯೋರ್ಮಧ್ಯೇ ಜಗಾಮ ಕಮಲೇಕ್ಷಣಃ ।
ಕರ್ಷತಾ ವೃಕ್ಷಯೋರ್ಮಧ್ಯೇ ತಿರ್ಯಗೇವಮುಲೂಖಲಂ ॥ ೩೮ ॥

ಭಗ್ನಾ ವುತ್ತುಂಗಶಾಖಾಗ್ರೌ ತೇನ ತೌ ಯಮಲಾರ್ಜುನೌ ।
ತತಃ ಕಟಕಟಾಶಬ್ದ ಸಮಾಕರ್ಣನಕಾತರಃ ॥ ೩೯ ॥

ಆಜಗಾಮ ವ್ರಜಜನೋ ದದೃಶೇ ಚ ಮಹಾದ್ರುಮೌ ।
ಭಗ್ನ ಸ್ಕಂಧೌ ನಿಪತಿತೌ ಭಗ್ನ ಶಾಖೌ ಮಹೀತಲೇ ॥ ೪೦ ॥

ದದರ್ಶ ಚಾಲ್ಪದಂತಾಸ್ಯಂ ಸ್ಮಿತಹಾಸಂ ಚ ಬಾಲಕಂ ।
ತಯೋರ್ಮಧ್ಯಗತಂ ಬದ್ಧಂ ದಾಮ್ನಾ ಗಾಢಂ ತಥೋದರೇ ॥ ೪೧ ॥

ತತಶ್ಚ ದಾಮೋದರತಾಂ ಸ ಯಯೌ ದಾಮಬಂಧನಾತ್ ।
ಗೋಪವೃದ್ಧಾಸ್ತತಃ ಸರ್ವೇ ನಂದಗೋಪಪುರೋಗಮಾಃ ॥ ೪೨ ॥

---

೩೮-೩೯. ಅಲ್ಲಿಯೇ ಸ್ವಲ್ಪದೂರದಲ್ಲಿ ಎರಡು ಶಮೀವೃಕ್ಷಗಳು ಒಂದಾಗಿ ಬೆಳದಿದ್ದವು. ಕೃಷ್ಣನು ಕಡವೋಡನ್ನು ಅಲ್ಲಿಗೆ ಎಳೆದುಕೊಂಡು ಹೋಗಿ ಅದನ್ನು ಮರಗಳೆರಡರ ಸಂದಿಯಲ್ಲಿ ಅಡ್ಡಲಾಗಿ ಸಿಕ್ಕಿಸಿ ಎಳೆದನು. ಆಗ ಆ ವೃಕ್ಷಗಳೆರಡೂ 'ಕಟ ಕಟ' ಎಂದು ಭಯಂಕರಶಬ್ದ ಮಾಡುತ್ತಾ ಕೆಳಗುರುಳಿದವು. ಅವುಗಳ ಕೊಂಬೆಗಳೆಲ್ಲವೂ ಮುರಿಯಿತು.

೪೦-೪೧. ಮರವು ಬಿದ್ದ ಶಬ್ದವನ್ನು ಕೇಳಿ ಗೋಕುಲದ ಜನರೆಲ್ಲರೂ ಓಡಿಬಂದರು. ಕೊಂಬೆಗಳೆಲ್ಲಾ ಮುರಿದು ಕೆಳಗೆ ಬಿದ್ದಿರುವ ಮರಗಳನ್ನೂ, ಚಿಕ್ಕ ಚಿಕ್ಕ ಹಲ್ಲುಗಳನ್ನು ತೋರಿಸುತ್ತಾ ನಗುತ್ತಿರುವ ಬಾಲಕನನ್ನೂ, ಆ ಮರಗಳ ಮಧ್ಯೆ ಬಂದಿರುವ ಹಗ್ಗದಿಂದ ಅವನ ಹೊಟ್ಟೆಗೆ ಬಿಗಿದಿರುವುದನ್ನೂ ಸಹ ಎಲ್ಲರೂ ಆಶ್ಚರ್ಯದಿಂದ ನೋಡಿದರು.

೪೨. ಅಂದಿನಿಂದ ಕೃಷ್ಣನಿಗೆ ದಾಮೋದರನೆಂದು ಹೆಸರಾಯಿತು. ಅನಂತರ ನಂದನೇ ಮೊದಲಾದ ಗೋಪವೃದ್ಧರೆಲ್ಲರೂ ಸೇರಿ ಇದುವರೆವಿಗೂ

ಮಂತ್ರಯಾಮಾಸುರುದ್ವಿಗ್ನಾ ಮಹೋತ್ಪಾತಾತಿಭೀರವಃ ।
ಸ್ಥಾನೇನೇಹ ನ ನಃ ಕಾರ್ಯಂ ವ್ರಜಾಮೋಽನ್ಯನ್ಮಹಾವನಂ ॥ ೪೩ ॥

ಉತ್ಪಾತಾ ಬಹವೋ ಹ್ಯತ್ರ ದೃಶ್ಯಂತೇ ನಾಶಹೇತವಃ ।
ಪೂತನಾಯಾ ವಿನಾಶಶ್ಚ ಶಕಟಸ್ಯ ವಿಪರ್ಯಯಃ ॥ ೪೪ ॥

ವಿನಾ ವಾತಾದಿದೋಷೇಣ ದ್ರುಮಯೋಃ ಪತನಂ ತಥಾ ।
ವೃಂದಾವನಮಿತಃ ಸ್ಥಾನಾತ್ತಸ್ಮಾದ್ಗಚ್ಛಾಮ ಮಾ ಚಿರಂ ॥ ೪೫ ॥

ಯಾವದ್ಭೌಮಮಹೋತ್ಪಾತದೋಷೋ ನಾಭಿಭವೇದ್ವ್ರಜಂ ।
ಇತಿ ಕೃತ್ವಾ ಮತಿಂ ಸರ್ವೇ ಗಮನೇ ತೇ ವ್ರಜೌಕಸಃ ॥ ೪೬ ॥

ಊಚುಃ ಸ್ವಂ ಸ್ವಂ ಕುಲಂ ಶೀಘ್ರಂ ಗಮ್ಯತಾಂ ಮಾ ವಿಲಂಬ್ಯತಾಂ ।
ತತಃ ಕ್ಷಣೇನ ಪ್ರಯಯುಃ ಶಕಟೈರ್ಗೋಧನೈಸ್ತಥಾ ॥ ೪೭ ॥

---

ಅನೇಕ ಉತ್ಪಾತಗಳು ಸಂಭವಿಸಿದವು, ಅದಕ್ಕೇನು ಮಾಡಬೇಕೆಂದು ಎಲ್ಲರೂ ಮಂತ್ರಾಲೋಚನೆಯನ್ನು ಮಾಡಿದರು.

೪೩-೪೫. ನಾವು ಈ ಜಾಗವನ್ನು ಬಿಟ್ಟು ಬಿಟ್ಟು ಬೇರೆಕಡೆ ಹೋಗಬೇಕು. ಏಕೆಂದರೆ ಇಲ್ಲಿ ನಾಶವನ್ನುಂಟುಮಾಡುವ ಅನೇಕ ಉತ್ಪಾತಗಳುಂಟಾಗಿರುವುವು. ಪೂತನಿಯ ವಿನಾಶವಾಯಿತು. ಶಕಟವು ನಾಶವಾಯಿತು. ಗಾಳಿ ಇಲ್ಲದೆ ಮರಗಳು ಉರುಳಿದವು. ಆದುದರಿಂದ ಈ ಸ್ಥಳವನ್ನು ಬಿಟ್ಟು ವೃಂದಾವನಕ್ಕೆ ಹೋಗೋಣ. ಜಾಗ್ರತೆಯಾಗಿ ಈ ಸ್ಥಾನವನ್ನು ಬಿಡಬೇಕು.

೪೬. ಇನ್ನೂ ಹೆಚ್ಚಾಗಿ ತೊಂದರೆಯುಂಟಾಗುವ ಮೊದಲೇ ಈ ಊರನ್ನು ಬಿಡಬೇಕು. ಇಲ್ಲದಿದ್ದರೆ ತುಂಬಾ ತೊಂದರೆಯಾದೀತು. ಎಂದು ಹೇಳಿಕೊಂಡು ಆ ಊರಿನವರೆಲ್ಲರೂ ಅಲ್ಲಿಂದ ಹೊರಡಲನುವಾದರು.

೪೭. ಎಲ್ಲರೂ ತಮ್ಮ ತಮ್ಮ ಕುಲದವರನ್ನು ಜಾಗ್ರತೆಯಾಗಿ ಹೊರಡಿರಿ. ವಿಲಂಬ ಮಾಡಬೇಡರಿ. ಎಂದು ಹೇಳುತ್ತಿರಲು, ಎಲ್ಲರೂ ಹಸುಗಳನ್ನೂ ಗಾಡಿಗಳನ್ನೂ ಅಟ್ಟಿಕೊಂಡು ಅಲ್ಲಿಂದ ಹೊರಟರು.

ಯೂಥಶೋ ವತ್ಸಪಾಲೀಶ್ಚ ಕಾಲಯಂತೋ ವ್ರಜೌಕಸಃ ।
ಸರ್ವಾವಯವನಿರ್ಧೂತಂ ಕ್ಷಣಮಾತ್ರೇಣ ತತ್ತದಾ ॥ ೪೮ ॥

ಕಾಕಕಾಕೀಸಮಾಕೀರ್ಣಂ ವ್ರಜಸ್ಥಾನಮಭೂದ್ದ್ವಿಜಾಃ ।
ವೃಂದಾವನಂ ಭಗವತಾ ಕೃಷ್ಣೇನಾಕ್ಲಿಷ್ಟಕರ್ಮಣಾ ॥ ೪೯ ॥

ಶುಭೇನ ಮನಸಾ ಧ್ಯಾತಂ ಗವಾಂ ವೃದ್ಧಿಮಭೀಪ್ಸತಾ ।
ತತಸ್ತತ್ರಾತಿರುಕ್ಷೇಽಪಿ ಧರ್ಮಕಾಲೇ ದ್ವಿಜೋತ್ತಮಾಃ ॥ ೫೦ ॥

ಪ್ರಾವೃಟ್ಕಾಲ ಇವಾಭೂಚ್ಚ ನವಶಷ್ಪಂ ಸಮಂತತಃ
ಸ ಸಮಾವಾಸಿತಃ ಸರ್ವೋ ವ್ರಜೋ ವೃಂದಾವನೇ ತತಃ ॥ ೫೧ ॥

ಶಕಟೀವಾಟಪರ್ಯಂತಚಂದ್ರಾರ್ಧಾಕಾರಸಂಸ್ಥಿತಿಃ ।
ವತ್ಸಬಾಲೌ ಚ ಸಂವೃತ್ತೌ ರಾಮದಾಮೋದರೌ ತತಃ ॥ ೫೨ ॥

---

೪೮-೪೯. ಕರುಗಳನ್ನುಳ್ಳ ಹಸುಗಳು ಗುಂಪು ಗುಂಪಾಗಿ ಆ ಹಳ್ಳಿಯಿಂದ ಹೊರಟವು. ಅಲ್ಲಿರುವವರೆಲ್ಲರೂ ಅಲ್ಲಿಂದ ಬೃಂದಾವನಕ್ಕೆ ತೆರಳಲು ಆ ಗೋಕುಲವು ಧೂಳಿನಿಂದ ಕೂಡಿ ಕಾಗೆಗಳು ಮುಂತಾದುವುಗಳಿಂದ ಆವೃತವಾಯಿತು. ವೃಂದಾವನವು ತುಂಟನಾದ ಕೃಷ್ಣನಿಂದ ಶೋಭಿಸಿತು.

೫೦-೫೧. ಆ ಕಾಲವು ಅತಿಕಠಿನವಾಗಿದ್ದರೂ ಎಲ್ಲರ ಮನಸ್ಸೂ ಅತಿನಿರ್ಮಲವಾಗಿದ್ದುದರಿಂದ ಹಸುಗಳೆಲ್ಲವೂ ಅಭಿವೃದ್ಧಿಯನ್ನು ಹೊಂದಿದವು. ಮಳೆಗಾಲದಂತೆ ಎಲ್ಲಾ ಕಡೆಯಲ್ಲಿಯೂ ಹೊಸದಾದ ಗರಿಕೆಗಳು ಹುಟ್ಟಿದವು. ಆ ಸ್ಥಳದಲ್ಲಿ ಗೋಕುಲದವರೆಲ್ಲರೂ ಹೋಗಿ ವಾಸಮಾಡಲು ಪ್ರಾರಂಭಿಸಿದರು.

೫೨. ಗಾಡಿಗಳ ಗುಂಪನ್ನೆಲ್ಲಾ ಅರ್ಧಚಂದ್ರಾಕಾರವಾಗಿ ನಿಲ್ಲಿಸಿದ್ದರು. ಆ ಸ್ಥಳದಲ್ಲಿ ಬಾಲಕರಾದ ಬಲರಾಮದಾಮೋದರರು ಸ್ವೇಚ್ಛೆಯಾಗಿ ಕ್ರೀಡಿಸುತ್ತಿದ್ದರು.

ತತ್ರ ಸ್ಥಿತೌ ತೌ ಗೋಷ್ಠೇ ಚೇರತುರ್ಬಾಲಲೀಲಯಾ ।
ಬರ್ಹಿಪತ್ರಕೃತಾಪೀಡೌ ವನ್ಯಪುಷ್ಪಾವತಂಸಕೌ ॥ ೫೩ ॥

ಗೋಪವೇಣುಕೃತಾತೋದ್ಯಪತ್ರವಾದ್ಯಕೃತಸ್ವನೌ ।
ಕಾಕಪಕ್ಷಧರೌ ಬಾಲೌ ಕುಮಾರಾವಿವ ಪಾವಕೌ ॥ ೫೪ ॥

ಹಸಂತೌ ಚ ರಮಂತೌ ಚ ಚೇರತುಸ್ತನ್ಮಹದ್ವನಂ ।
ಕ್ವಚಿದ್ಧಸಂತಾವನ್ಯೋನ್ಯಂ ಕ್ರೀಡಮಾನೌ ತಥಾ ಪರೈಃ ॥ ೫೫ ॥

ಗೋಪಪುತ್ರೈಃ ಸಮಂ ವತ್ಸಾಂಶ್ಚಾರಯಂತೌ ವಿಚೇರತುಃ ।
ಕಾಲೇನ ಗಚ್ಛತಾ ತೌ ತು ಸಪ್ತವರ್ಷೌ ಬಭೂವತುಃ ॥ ೫೬ ॥

ಸರ್ವಸ್ಯ ಜಗತಃ ಪಾಲೌ ವತ್ಸಪಾಲೌ ಮಹಾವ್ರಜೇ ।
ಪ್ರಾವೃಟ್ಕಾಲಸ್ತತೋಽತೀವ ಮೇಘೌಘಸ್ಥಗಿತಾಂಬರಃ ॥ ೫೭ ॥

---

೫೩-೫೪. ಬೃಂದಾವನದಲ್ಲಿ, ರಾಮಕೃಷ್ಣರು ನವಿಲುಗಳ ಗರಿಗಳನ್ನೆಣೆಯುತ್ತಾ, ಕಾಡುಕುಸುಮಗಳನ್ನು ಕಿವಿಗಳಮೇಲೆ ಧರಿಸಿಕೊಳ್ಳುತ್ತಾ, ಗೋಪಬಾಲಕರ ಹತ್ತಿರವಿರುವ ಕೊಳಲುಗಳನ್ನು ತಾವೂ ಬಾರಿಸುತ್ತಾ ಮುಂಜುಟ್ಟಿನಿಂದ ಶೋಭಿಸುತ್ತಾ ಅಗ್ನಿಯಂತೆ ತೇಜಸ್ವಿಗಳಾಗಿ ಬಾಲಕ್ರೀಡೆಗಳನ್ನು ಆಡುತ್ತಿದ್ದರು.

೫೫. ಗೋಪಬಾಲಕರೊಡಗೂಡಿ ನಗುತ್ತಲೂ, ಕುಣಿಯುತ್ತಲೂ, ಆಟವಾಡುತ್ತಲೂ ಮತ್ತು ಕರುಗಳನ್ನು ಓಡಾಡಿಸುತ್ತಲೂ ಕ್ರೀಡಿಸುತ್ತಿದ್ದರು.

೫೬. ಈರೀತಿ ಅನೇಕವರ್ಷಗಳು ಕಳೆದವು. ಆಗ ಅವರಿಬ್ಬರಿಗೂ ಏಳು ವರ್ಷ ವಯಸ್ಸಾಯಿತು. ಸರ್ವಜಗದ್ರಕ್ಷಕರಾದ ಅವರು ಇತರರಿಂದ ರಕ್ಷಿಸಲ್ಪಡುತ್ತಾ ಆ ಬೃಂದಾವನದಲ್ಲಿ ಸುಖವಾಗಿದ್ದರು.

೫೭. ಮಳೆಗಾಲವು ಪ್ರಾರಂಭವಾಯಿತು. ಆಕಾಶದ ತುಂಬಾ ಮೇಘಗಳು ಆವರಿಸಿಕೊಂಡುವು. ಮಳೆಯು ಧಾರೆಧಾರೆಯಾಗಿ ಬೀಳುತ್ತಾ ದಿಕ್ಕುಗಳನ್ನು ಐಕ್ಯಮಾಡುವುದೋ ಎಂಬಂತೆ ಮಳೆ ಸುರಿಯಿತು.

ಬಭೂವ ವಾರಿಧಾರಾಭಿರೈಕ್ಯಂ ಕುರ್ವನ್ದಿಶಾಮಿವ ।
ಪ್ರರೂಢನವಪುಷ್ಪಾಢ್ಯಾ ಶಕ್ರಗೋಪವೃತಾ ಮಹೀ ॥ ೫೮ ॥

ಯಥಾ ಮಾರಕತೇ ವಾಸೀತ್ಪದ್ಮರಾಗವಿಭೂಷಿತಾ ।
ಊಹುರುನ್ಮಾರ್ಗಗಾಮೀನಿ ನಿಮ್ನಗಾಂಭಾಂಸಿ ಸರ್ವತಃ ॥ ೫೯ ॥

ಮನಾಂಸಿ ದುರ್ವಿನೀತಾನಾಂ ಪ್ರಾಪ್ಯ ಲಕ್ಷ್ಮೀಂ ನವಾಮಿವ ।
ವಿಕಾಲೇ ಚ ಯಥಾಕಾಮಂ ವ್ರಜಮೇತ್ಯ ಮಹಾಬಲೌ ।
ಗೋಪೈಃ ಸಮಾನ್ಯೈಃ ಸಹಿತೌ ಚಿಕ್ರೀಡಾತೇಽಮರಾವಿವ ॥ ೬೦ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಾಲಚರಿತೇ ವೃಂದಾವನ
ಪ್ರವೇಶವರ್ಣನಂ ನಾಮ ಚತುರಶೀತ್ಯಧಿಕ-
ಶತತಮೋಽಧ್ಯಾಯಃ

---

೫೮. ಆಗ ಗಿಡಮರಗಳಲ್ಲೆಲ್ಲಾ ಹೊಸಹೊಸದಾಗಿ ಹೂಗಳು ಬಿಡಲು ಪ್ರಾರಂಭಿಸಿದವು. ಭೂಮಿಯು ಪ್ರಕಾಶಿಸಿತು. ಹಸುರಾದ ಹುಲ್ಲುಗಳಿಂದ ಕೂಡಿದ ಭೂಮಿಯು ಪಚ್ಚೆಯಿಂದ ನಿರ್ಮಿಸಿರುವಂತೆ ಶೋಭಿಸಿತು.

೫೯. ಎಲ್ಲೆಲ್ಲಿಯೂ ಮಳೆಯಿಂದ ನೀರಿನ ಪ್ರವಾಹವು ಹರಿಯಲು ಪ್ರಾರಂಭಿಸಿತು. ನೂತನವಾದ ಸಿರಿಯನ್ನು ಪಡೆದ ದುಷ್ಟರ ಮನಸ್ಸಿನಂತೆ ಆಳವಾದ ಪ್ರವಾಹವು ಏರಿಗಳನ್ನು ಒಡೆದುಕೊಂಡು ಹರಿಯಿತು.

೬೦. ಇಂತಹ ಸಮಯದಲ್ಲಿ ಮಹಾಬಲಶಾಲಿಗಳಾದ ರಾಮಕೃಷ್ಣರು ಗೋಪರೊಡನೆ ಸೇರಿ ಸ್ವೇಚ್ಛೆಯಾಗಿ, ಆಟವಾಡುತ್ತಾ ದೇವತೆಗಳಂತೆ ಪ್ರಕಾಶಿಸಿದರು.

ಶ್ರೀಬ್ರಹ್ಮಮಹಾಪುರಾಣದ ಬಾಲಚರಿತೆಯಲ್ಲಿ ವೃಂದಾವನಪ್ರವೇಶವರ್ಣನ
ವೆಂಬ ನೂರೆಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾ ಪುರಾಣೇ ಬ್ರಾಹ್ಮೇ

## ಪಂಚಾಶೀತ್ಯಧಿಕಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಏಕದಾ ತು ವಿನಾ ರಾಮಂ ಕೃಷ್ಣೋ ವೃಂದಾವನಂ ಯಯೌ ।
ವಿಚಚಾರ ವೃತೋ ಗೋಪೈರ್ವನ್ಯಪುಷ್ಪಸ್ರಗುಜ್ಜ್ವಲಃ ॥ ೧ ॥

ಸ ಜಗಾಮಾಥ ಕಾಲಿಂದೀಂ ಲೋಲಕಲ್ಲೋಲಶಾಲಿನೀಂ ।
ತೀರಸಂಲಗ್ನಫೇನೋಘೈರ್ಹಸಂತೀಮಿವ ಸರ್ವತಃ ॥ ೨ ॥

ತಸ್ಯಾಂ ಚಾತಿಮಹಾಭೀಮಂ ವಿಷಾಗ್ನಿಕಣದೂಷಿತಂ ।
ಹ್ರದಂ ಕಾಲೀಯನಾಗಸ್ಯ ದದರ್ಶಾತಿವಿಭೀಷಣಂ ॥ ೩ ॥

---

### ನೂರೆಂಭತ್ತೈದನೆಯ ಅಧ್ಯಾಯವು

೧. ವ್ಯಾಸನಿಂತೆಂದನು :—ಒಂದುದಿನ ಕೃಷ್ಣನು ಬಲರಾಮನನ್ನು ಬಿಟ್ಟು ಗೋಪಾಲಕರೊಡನೆ ವೃಂದಾವನಕ್ಕೆ ಹೋಗಿ ಸಮೀಪದ ವನಗಳಲ್ಲಿರುವ ಹೂಗಳಿಂದ ಮಾಲಿಕೆಗಳನ್ನು ಮಾಡಿ ಧರಿಸಿಕೊಂಡು ಆನಂದದಿಂದ ಓಡಾಡಿದರು.

೨. ಅನಂತರ ಕೃಷ್ಣನು ಅನೇಕ ಅಲೆಗಳಿಂದ ಚಂಚಲವಾಗಿರುವ, ತೀರದಲ್ಲಿರುವ ನೊರೆಗಳಿಂದ ನಗುತ್ತಲಿರುವುದೋ ಎಂಬಂತಿರುವ ಕಾಲಂದೀ ಮಡುವಿಗೆ ಆಟವಾಡಲು ಹೋದನು.

೩. ಆ ಹ್ರದದಲ್ಲಿ ಅತಿಭಯಂಕರವಾಗಿ, ವಿಷಾಗ್ನಿಯ ತುಂತುರುಗಳಿಂದ ನೀರನ್ನು ಕಶ್ಮಲಮಾಡುತ್ತಿರುವ ಸರ್ಪವೊಂದನ್ನು ನೋಡಿದನು.

ವಿಷಾಗ್ನಿನಾ ವಿಸರತಾ ದಗ್ಧತೀರಮಹಾತರುಂ ।
ವಾತಾಹತಾಂಬುವಿಕ್ಷೇಪಸ್ಪರ್ಶದಗ್ಧವಿಹಂಗಮಂ ॥ ೪ ॥

ತಮತೀವ ಮಹಾರೌದ್ರಂ ಮೃತ್ಯುವಕ್ತ್ರಮಿವಾಪರಂ ।
ವಿಲೋಕ್ಯ ಚಿಂತಯಾಮಾಸ ಭಗವಾನ್ಮಧುಸೂದನಃ ॥ ೫ ॥

ಅಸ್ಮಿನ್ವಸತಿ ದುಷ್ಟಾತ್ಮಾ ಕಾಲೀಯೋಽಸೌ ವಿಷಾಯುಧಃ ।
ಯೋ ಮಯಾ ನಿರ್ಜಿತಸ್ತ್ಯಕ್ತ್ವಾ ದುಷ್ಟೋ ನಷ್ಟಃ ಪಯೋನಿಧೌ ॥ ೬ ॥

ತೇನೇಯಂ ದೂಷಿತಾ ಸರ್ವಾ ಯಮುನಾ ಸಾಗರಂಗಮಾ ।
ನ ನರೈರ್ಗೋಧನೈರ್ವಾಪಿ ತೃಷಾರ್ತೈರುಪಭುಜ್ಯತೇ ॥ ೭ ॥

ತದಸ್ಯ ನಾಗರಾಜಸ್ಯ ಕರ್ತವ್ಯೋ ನಿಗ್ರಹೋ ಮಯಾ ।
ನಿತ್ಯತ್ರಸ್ತಾಃ ಸುಖಂ ಯೇನ ಚರೇಯುರ್ವ್ರಜವಾಸಿನಃ ॥ ೮ ॥

---

೪. ಆ ಮಡುವಿನ ತೀರದಲ್ಲಿರುವ ಮರಗಳೆಲ್ಲವೂ ಸರ್ಪದ ವಿಷಾಗ್ನಿಯಿಂದ ಸುಟ್ಟು ಭಸ್ಮವಾಗಿದ್ದವು. ಮಡುವಿನ ಮೇಲೆ ಬೀಸಿದ ಗಾಳಿಯಿಂದ ಮರದ ಮೇಲಿರುವ ಪಕ್ಷಿಗಳೆಲ್ಲವೂ ದಗ್ಧವಾಗುತ್ತಿದ್ದವು.

೫. ಈರೀತಿಯಾಗಿ ಅತಿಭಯಂಕರವೂ, ಮತ್ತೊಬ್ಬ ಮೃತ್ಯುವಿನೋಪಾದಿಯಲ್ಲಿಯೂ ಇರುವ ಆ ಸರ್ಪವನ್ನು ನೋಡಿ ಮಧುಸೂದನನು ಯೋಚಿಸತೊಡಗಿದನು.

೬. ಈ ದುಷ್ಟವಾದ ಕಾಲೀಯಸರ್ಪವನ್ನು ನಾನು ಹಿಂದೆ ಸಮುದ್ರದಲ್ಲಿ ಸೋಲಿಸಿದ್ದೆನು. ಈಗ ಇದು ಈ ಕಾಲಿಂದೀಮಡುವಿನಲ್ಲಿ ವಿಷವನ್ನು ಸುರಿಸುತ್ತಾ ವಾಸವಾಗಿರುವುದು.

೭. ಈ ಸರ್ಪದಿಂದ ವಿಷಪೂರಿತವಾದ ಮಡುವಿನ ನೀರು ಹಸುಗಳಾಗಲೀ ಮನುಷ್ಯರಾಗಲೀ ಬಾಯಾರಿದರೂ ಸಹ ಕುಡಿಯದಂತಾಗಿರುವುದು.

೮. ಆದುದರಿಂದ ಈಗ ನಾನು ಈ ಸರ್ಪವನ್ನು ಸೋಲಿಸಬೇಕು. ಆರೀತಿ ಮಾಡಿದರೆ ಇದುವರೆವಿಗೂ ಇದರಿಂದ ಹೆದರಿದ ಹಳ್ಳಿಯವರು ಇನ್ನು ಮುಂದಾದರೂ ಸುಖವಾಗಿ ಸಂಚರಿಸಲಿ.

ಏತದರ್ಥಂ ನೃಲೋಕೇಽಸ್ಮಿನ್ನವತಾರೋ ಮಯಾ ಕೃತಃ ।
ಯದೇಷಾಮುತ್ಪಥಸ್ಥಾನಾಂ ಕಾರ್ಯಾ ಶಾಸ್ತಿರ್ದುರಾತ್ಮನಾಂ ॥ ೯ ॥

ತದೇತನ್ನಾತಿದೂರಸ್ಥಂ ಕದಂಬಮುರುಶಾಖಿನಂ ।
ಅಧಿರುಹ್ಯೋತ್ಪತಿಷ್ಯಾಮಿ ಹ್ರದೇಽಸ್ಮಿನ್ ಜೀವನಾಶಿನಃ ॥ ೧೦ ॥

॥ ವ್ಯಾಸ ಉವಾಚ ॥

ಇತ್ಥಂ ವಿಚಿಂತ್ಯ ಬಧ್ವಾ ಚ ಗಾಢಂ ಪರಿಕರಂ ತತಃ ।
ನಿಪಪಾತ ಹ್ರದೇ ತತ್ರ ಸರ್ಪರಾಜಸ್ಯ ವೇಗತಃ ॥ ೧೧ ॥

ತೇನಾಪಿ ಪತತಾ ತತ್ರ ಕ್ಷೋಭಿತಃ ಸ ಮಹಾಹ್ರದಃ ।
ಅತ್ಯರ್ಥದೂರಜಾತಾಂಶ್ಚ ತಾಂಶ್ಚಾಸಿಂಚನ್ಮಹೀರುಹಾನ್ ॥ ೧೨ ॥

ತೇಽಹಿದುಷ್ಟವಿಷಜ್ವಾಲಾತಪ್ತಾಂಬುತಪನೋಕ್ಷಿತಾಃ ।
ಜಜ್ವಲುಃ ಪಾದಪಾಃ ಸದ್ಯೋ ಜ್ವಾಲಾವ್ಯಾಪ್ತದಿಗಂತರಾಃ ॥ ೧೩ ॥

---

೯. ಇಂತಹ ಕಾರ್ಯಕ್ಕೋಸ್ಕರವಾಗಿಯೇ ನಾನು ಮನುಷ್ಯಲೋಕದಲ್ಲಿ ಅವತರಿಸಿದುದು ಮಾರ್ಗವನ್ನು ಬಿಟ್ಟು ಹೋಗುವ ದುರಾತ್ಮರಿಗೆ ತಕ್ಕ ಶಾಸ್ತಿ ಮಾಡಲೇಬೇಕು.

೧೦. ಆದುದರಿಂದ ಇಲ್ಲೇ ಸಮೀಪದಲ್ಲಿರುವ ಕದಂಬಮರವನ್ನು ಹತ್ತಿ ಅದರ ಮೇಲಿಂದ ಮಡುವಿನೊಳಕ್ಕೆ ಧುಮುಕುವೆನು.

೧೧. ಈರೀತಿ ಕೃಷ್ಣನು ಯೋಚಿಸಿ ಸೊಂಟವನ್ನು ಬಿಗಿಯಾಗಿ ಕಟ್ಟಿಕೊಂಡು ಆ ನಾಗರಾಜನಿರುವ ಮಡುವಿನೊಳಕ್ಕೆ ಧುಮುಕಿದನು.

೧೨. ಕೃಷ್ಣನು ಧುಮುಕಿದುದರಿಂದ ಆ ದೊಡ್ಡ ಮಡುವು ಅಲ್ಲೋಲ ಕಲ್ಲೋಲವಾಯಿತು. ಬಿದ್ದ ರಭಸಕ್ಕೆ ನೀರಿನ ಹನಿಗಳು ಬಹುದೂರ ಮೇಲಕ್ಕೆ ಹಾರಿ ದಡದಲ್ಲಿರುವ ಮರಗಳನ್ನೆಲ್ಲಾ ನೆನೆಸಿದವು.

೧೩. ನೀರೆಲ್ಲವೂ ಕಲಕಿಹೋಗಲು ಆ ಸರ್ಪದ ವಿಷಜ್ವಾಲೆಯು ಜಾಸ್ತಿಯಾಯಿತು. ನೀರೆಲ್ಲವೂ ಕುದಿಯಲು ಪ್ರಾರಂಭಿಸಿತು. ಅದರ ಜ್ವಾಲೆಯಿಂದ ಸಮೀಪದ ಮರಗಳೆಲ್ಲವೂ ಉರಿಯಲು ಪ್ರಾರಂಭಿಸಿದವು. ಅದರ ಜ್ವಾಲೆಯು ದಿಗಂತದವರೆಗೂ ವ್ಯಾಪಿಸಿದ್ದಿತು.

ಆಸ್ಫೋಟಯಾಮಾಸ ತದಾ ಕೃಷ್ಣೋ ನಾಗಹ್ರದಂ ಭುಜೈಃ ।
ತಚ್ಛಬ್ದಶ್ರವಣಾಚ್ಚಾಥ ನಾಗರಾಜೋಽಭ್ಯುಪಾಗಮತ್ ॥ ೧೪ ॥

ಆತಾಮ್ರನಯನಃ ಕೋಪಾದ್ವಿಷಜ್ವಾಲಾಕುಲೈಃ ಫಣೈಃ ।
ವೃತೋ ಮಹಾವಿಷೈಶ್ಚಾನ್ಯೈರುರಗೈರನಿಲಾಶನೈಃ ॥ ೧೫ ॥

ನಾಗಪತ್ನ್ಯಶ್ಚ ಶತಶೋ ಹಾರಿಹಾರೋಪಶೋಭಿತಾಃ ।
ಪ್ರಕಂಪಿತತನೂತ್ಕ್ಷೇಪಚಲತ್ಕುಂಡಲಕಾಂತಯಃ ॥ ೧೬ ॥

ತತಃ ಪ್ರವೇಷ್ಟಿತಃ ಸರ್ಪೈಃ ಸ ಕೃಷ್ಣೋ ಭೋಗಬಂಧನೈಃ ।
ದದಂಶುಶ್ಚಾಪಿ ತೇ ಕೃಷ್ಣಂ ವಿಷಜ್ವಾಲಾವಿಲೈರ್ಮುಖೈಃ ॥ ೧೭ ॥

ತಂ ತತ್ರ ಪತಿತಂ ದೃಷ್ಟ್ವಾ ನಾಗಭೋಗನಿಪೀಡಿತಂ ।
ಗೋಪಾ ವ್ರಜಮುಪಾಗತ್ಯ ಚುಕ್ರುಶುಃ ಶೋಕಲಾಲಸಾಃ ॥ ೧೮ ॥

---

೧೪. ಕೃಷ್ಣನು ತನ್ನ ಕೈಗಳಿಂದ ಮಡುವನ್ನು ಕಲಕಿದನು. ಅದರ ಶಬ್ದವನ್ನು ಕೇಳಿ ನಾಗರಾಜನು ಜಾಗ್ರತೆಯಾಗಿ ಕೃಷ್ಣನ ಎದುರಾಗಿ ಬಂದನು.

೧೫. ನಾಗರಾಜನ ಕಣ್ಣುಗಳೆಲ್ಲವೂ ಕೋಪದಿಂದ ಕೆಂಪಾಗಿದ್ದವು. ಹೆಡೆಗಳಿಂದ ವಿಷಜ್ವಾಲೆಯು ಹೊರಬರುತ್ತಿತ್ತು. ಅನೇಕ ಹೆಡೆಗಳು ಕೆಂಪಾಗಿಯೂ ಮಹಾವಿಷಪೂರಿತವಾಗಿಯೂ ಇದ್ದವು.

೧೬. ನಾಗರಾಜನ ಅನೇಕ ಪತ್ನಿಯರು ಮನೋಹರವಾದ ಹಾರಗಳಿಂದ ಶೋಭಿಸುತ್ತಾ, ಕರ್ಣಕುಂಡಲಗಳಿಂದ ಕಾಂತಿಯುಕ್ತರಾಗಿ ಅಲ್ಲಿಗೆ ಬಂದರು.

೧೭. ಇನ್ನೂ ಅನೇಕ ಸರ್ಪಗಳೆಲ್ಲವೂ ಅಲ್ಲಿಗೆ ಬಂದು ಸೇರಿದವು. ಅವೆಲ್ಲವೂ ತಮ್ಮ ವಿಷಪೂರಿತವಾದ ಹೆಡೆಗಳಿಂದ ಕೃಷ್ಣನನ್ನು ಕಡಿಯಲು ಪ್ರಾರಂಭಿಸಿದವು.

೧೮. ಕೃಷ್ಣನು ಮಡುವಿಗೆ ಬಿದ್ದುದನ್ನೂ, ಅಲ್ಲಿ ಸರ್ಪಗಳು ಅವನನ್ನು ಹಿಂಸಿಸುತ್ತಿರುವುದನ್ನೂ, ನೋಡಿ ದುಃಖಿತರಾದ ಗೋಪಾಲಕರು ವೃಂದಾವನಕ್ಕೆ ಬಂದು ಗಟ್ಟಿಯಾಗಿ ಅಳಲು ಪ್ರಾರಂಭಿಸಿದರು.

॥ ಗೋಪಾ ಊಚುಃ ॥

ಏಷ ಕೃಷ್ಣೋ ಗತೋ ಮೋಹಮಗ್ನೋ ವೈ ಕಾಲೀಯೋ ಹ್ರದೇ ।
ಭಕ್ಷ್ಯತೇ ಸರ್ಪರಾಜೇನ ತದಾಗಚ್ಛತ ಮಾ ಚಿರಂ ॥ ೧೯ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ತತೋ ಗೋಪಾ ವಜ್ರಪಾತೋಪಮಂ ವಚಃ ।
ಗೋಪ್ಯಶ್ಚ ತ್ವರಿತಾ ಜಗ್ಮುರ್ಯಶೋದಾಪ್ರಮುಖಾ ಹ್ರದಂ ॥ ೨೦ ॥

ಹಾ ಹಾ ಕ್ವಾಸಾವಿತಿ ಜನೋ ಗೋಪೀನಾಮತಿವಿಹ್ವಲಃ ।
ಯಶೋದಯಾ ಸಮಂ ಭ್ರಾಂತೋ ದ್ರುತಃ ಪ್ರಸ್ಖಲಿತೋ ಯಯೌ ॥ ೨೧ ॥

ನಂದಗೋಪಶ್ಚ ಗೋಪಾಶ್ಚ ರಾಮಶ್ಚಾದ್ಭುತವಿಕ್ರಮಃ ।
ತ್ವರಿತಂ ಯಮುನಾಂ ಜಗ್ಮುಃ ಕೃಷ್ಣದರ್ಶನಲಾಲಸಾಃ ॥ ೨೨ ॥

ದದೃಶುಶ್ಚಾಪಿ ತೇ ತತ್ರ ಸರ್ಪರಾಜವಶಂಗತಂ ।
ನಿಷ್ಪ್ರಯತ್ನಂ ಕೃತಂ ಕೃಷ್ಣಂ ಸರ್ಪಭೋಗೇನ ವೇಷ್ಟಿತಂ ॥ ೨೩ ॥

---

೧೯. ಕೃಷ್ಣನು ಕಾಣದೆ ಸರ್ಪವಿರುವ ಮಡುವಿಗೆ ಬಿದ್ದುಬಿಟ್ಟನು. ಸರ್ಪರಾಜನು ಅಲ್ಲಿ ಅವನನ್ನು ಕಚ್ಚುತ್ತಿರುವನು. ಬನ್ನಿ, ಬನ್ನಿ, ಜಾಗ್ರತೆಯಾಗಿ ಬನ್ನಿರಿ, ತಡಮಾಡಬೇಡಿರಿ ಎಂದರು.

೨೦. ಗೋಪಾಲಕರಾಡಿದ ವಜ್ರಾಯುಧದ ಏಟಿನಂತೆ ಅತಿದುಃಖಕರವಾದ ಮಾತನ್ನು ಕೇಳಿ ಆ ಹಳ್ಳಿಯ ಗೋಪಿಯರೆಲ್ಲರೂ ಯಶೋದೆಯೂ ಮಡುವಿನ ಸಮೀಪಕ್ಕೆ ಬಂದರು.

೨೧. ಅಯ್ಯೋ! ಅಯ್ಯೋ! ಅವನೆಲ್ಲಿ ಹೋದ? ಎಂಬುದಾಗಿ ಗೋಪಗೋಪಿಯರೆಲ್ಲರೂ ಯಶೋದೆಯೂ ಭ್ರಾಂತರಾಗಿ ಅಳುತ್ತಾ ಎಡವುತ್ತಾ ಜಾಗ್ರತೆಯಾಗಿ ಅಲ್ಲಿಗೆ ಹೋದರು.

೨೨. ನಂದಗೋಪನೂ, ಬಲರಾಮನೂ ಸಹ ಗೋಪರೊಡಗೂಡಿ ಕೃಷ್ಣನನ್ನು ನೋಡಬೇಕೆಂಬ ಆಸೆಯಿಂದ ಜಾಗ್ರತೆಯಾಗಿ ಯಮುನೆಯ ಹತ್ತಿರಕ್ಕೆ ಬಂದರು.

೨೩. ಆ ಮಡುವಿನಲ್ಲಿ ಕೃಷ್ಣನು ಸರ್ಪರಾಜನ ಕೈಗೆ ಸಿಕ್ಕಿ ಬಿದ್ದಿರುವುದನ್ನೂ ಆದರೂ ಬಿಡಿಸಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡದೆ ಸುಮ್ಮನಿರುವುದನ್ನೂ, ಸರ್ಪದ ಹೆಡೆಗಳಿಂದ ಆವೃತವಾಗಿರುವುದನ್ನೂ ನೋಡಿದರು.

ನಂದಗೋಪಶ್ಚ ನಿಶ್ಚೇಷ್ಟಃ ಪಶ್ಯನ್ಸುತ್ರಮುಖಂ ಭೃಶಂ ।
ಯಶೋದಾ ಚ ಮಹಾಭಾಗಾ ಬಭೂವ ಮುನಿಸತ್ತಮಾಃ ॥ ೨೪ ॥

ಗೋಪ್ಯಸ್ತ್ವನ್ಯಾ ರುದತ್ಯಶ್ಚ ದದೃಶುಃ ಶೋಕಕಾತರಾಃ ।
ಪ್ರೋಚುಶ್ಚ ಕೇಶವಂ ಪ್ರೀತ್ಯಾ ಭಯಕಾತರಗದ್ಗದಂ ॥ ೨೫ ॥

ಸರ್ವಾ ಯಶೋದಯಾ ಸಾರ್ಧಂ ವಿಶಾಮೋऽತ್ರ ಮಹಾಹ್ರದೇ ।
ನಾಗರಾಜಸ್ಯ ನೋ ಗಂತುಮಸ್ಮಾಕಂ ಯುಜ್ಯತೇ ವ್ರಜೇ ॥ ೨೬ ॥

ದಿವಸಃ ಕೋ ವಿನಾ ಸೂರ್ಯಂ ವಿನಾ ಚಂದ್ರೇಣ ಕಾ ನಿಶಾ ।
ವಿನಾ ದುಗ್ಧೇನ ಕಾ ಗಾವೋ ವಿನಾ ಕೃಷ್ಣೇನ ಕೋ ವ್ರಜಃ ।
ವಿನಾ ಕೃತಾ ನ ಯಾಸ್ಯಾಮಃ ಕೃಷ್ಣೇನಾನೇನ ಗೋಕುಲಂ ॥ ೨೭ ॥

॥ ವ್ಯಾಸ ಉವಾಚ ॥

ಇತಿ ಗೋಪೀವಚಃ ಶ್ರುತ್ವಾ ರೌಹಿಣೇಯೋ ಮಹಾಬಲಃ ।
ಉವಾಚ ಗೋಪಾನ್ವಿಧುರಾನ್ವಿಲೋಕ್ಯ ಸ್ತಿಮಿತೇಕ್ಷಣಃ ॥ ೨೮ ॥

---

೨೪. ನಂದಗೋಪನೂ, ಯಶೋದೆಯೂ ಕೃಷ್ಣನ ಮುಖವನ್ನು ನೋಡಿ ಜ್ಞಾನತಪ್ಪಿ ಬಿದ್ದುಬಿಟ್ಟರು.

೨೫. ಗೋಪಿಯರೆಲ್ಲರೂ ಅತಿಶೋಕದಿಂದ ಕಾತುರರಾಗಿ ಅಳುತ್ತಾ ಕೇಶವನನ್ನು ಕುರಿತು ಇಂತೆಂದರು.

೨೬. ನಾವೆಲ್ಲರೂ ಯಶೋದೆಯೊಡನೆ ಈ ಮಹಾಮಡುವನ್ನು ಪ್ರವೇಶಿಸುವೆವು. ನಿನ್ನನ್ನು ಬಿಟ್ಟು ನಾವು ನಮ್ಮ ಹಳ್ಳಿಗೆ ಹೋಗಲಾರೆವು.

೨೭. ಸೂರ್ಯನಿಲ್ಲದ ದಿವಸವೂ, ಚಂದ್ರನಿಲ್ಲದ ರಾತ್ರಿಯೂ, ಹಾಲಿಲ್ಲದ ಹಸುಗಳೂ ಹೇಗೆ ಶೋಭಿಸುವುದಿಲ್ಲವೋ ಹಾಗೆ ಕೃಷ್ಣನಿಲ್ಲದ ನಮ್ಮ ವ್ರಜವು ಶೋಭಿಸುವುದಿಲ್ಲ. ಆದುದರಿಂದ ಕೃಷ್ಣನಿಲ್ಲದೆ ನಾವು ಗೋಕುಲಕ್ಕೆ ಹೋಗಲಾರೆವು ಎಂದು ದುಃಖಿಸಿದರು.

೨೮-೨೯. ಗೋಪಿಯರಾಡಿದ ಮಾತನ್ನು ಕೇಳಿ ಮಹಾಬಲಶಾಲಿಯಾದ ಬಲರಾಮನು ದುಃಖಿಸುತ್ತಿರುವ ಗೋಪರನ್ನೂ, ಸುತನನ್ನು ನೋಡಬೇಕೆಂದು

ನಂದಂ ಚ ದೀನಮತ್ಯರ್ಥಂ ನ್ಯಸ್ತದೃಷ್ಟಿಂ ಸುತಾನನೇ ।
ಮೂರ್ಛಾಕುಲಾಂ ಯಶೋದಾಂ ಚ ಕೃಷ್ಣಮಾಹಾತ್ಮ್ಯಸಂಜ್ಞಯಾ॥ ೨೯॥

॥ ಬಲರಾಮ ಉವಾಚ ॥

ಕಿಮಯಂ ದೇವದೇವೇಶ ಭಾವೋಽಯಂ ಮಾನುಷಸ್ತ್ವಯಾ ।
ವ್ಯಜ್ಯತೇ ಸ್ವಂ ತಮಾತ್ಮಾನಂ ಕಿಮನ್ಯಂ ತ್ವಂ ನ ವೇತ್ಸಿ ಯತ್ ॥ ೩೦ ॥

ತ್ವಮಸ್ಯ ಜಗತೋ ನಾಭಿಃ ಸುರಾಣಾಮೇವ ಚಾಶ್ರಯಃ ಃ
ಕರ್ತಾಪಹರ್ತಾ ಪಾತಾ ಚ ತ್ರೈಲೋಕ್ಯಂ ತ್ವಂ ತ್ರಯೀಮಯಃ ॥ ೩೧ ॥

ಅತ್ರಾವತೀರ್ಣಯೋಃ ಕೃಷ್ಣ ಗೋಪಾ ಏವ ಹಿ ಬಾಂಧವಾಃ ।
ಗೋಪ್ಯಶ್ಚ ಸೀದತಃ ಕಸ್ಮಾತ್ತ್ವಂ ಬಂಧೂನ್ಸಮುಪೇಕ್ಷಸೇ ॥ ೩೨ ॥

ದರ್ಶಿತೋ ಮಾನುಷೋ ಭಾವೋ ದರ್ಶಿತಂ ಬಾಲಚೇಷ್ಟಿತಂ ।
ತದಯಂ ದಮ್ಯತಾಂ ಕೃಷ್ಣ ದುರಾತ್ಮಾ ದಶನಾಯುಧಃ ॥ ೩೩ ॥

---

ದೀನನಾಗಿರುವ ನಂದನನ್ನೂ, ಮೂರ್ಛಾಕುಲಳಾದ ಯಶೋದೆಯನ್ನೂ ಸಂತೈಸುತ್ತಾ ಕೃಷ್ಣನನ್ನು ಕುರಿತಿಂತೆಂದನು—

೩೦. ಓ ದೇವದೇವನೇ, ಇದೇನಿದು ಮನುಷ್ಯರಂತೆ ವರ್ತಿಸುತ್ತಿರುವೆ? ಇದನ್ನು ಬಿಟ್ಟು ಮತ್ತಾವ ವ್ಯವಹಾರವೂ ನಿನಗೆ ತಿಳಿಯದೇನು?

೩೧. ನೀನು ಜಗತ್ತಿಗೆ ನಾಭಿಸ್ವರೂಪನು. ದೇವತೆಗಳು ನಿನ್ನ ಆಶ್ರಯದಲ್ಲಿಯೇ ಇರುವರು. ವೇದಸ್ವರೂಪನಾದ ನೀನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು.

೩೨-೩೩. ನೋಡು. ಇಲ್ಲಿ ಬಂದಿರುವ ಗೋಪಗೋಪಿಯರೆಲ್ಲರೂ, ಬಂಧುಗಳೂ, ಯಶೋಧಾ ನಂದನರೂ ದುಃಖಪಡುತ್ತಿರುವರು. ಅವರನ್ನು ನೀನೇಕೆ ಉಪೇಕ್ಷೆಮಾಡುತ್ತಿರುವೆ? ಮನುಷ್ಯನಂತೆ ವ್ಯವಹರಿಸಿ ಬಾಲಲೀಲೆಯನ್ನು ತೋರಿಸುತ್ತಿರುವೆ. ಈಗ ಈ ದುಷ್ಟಸರ್ಪವನ್ನು ನಾಶಮಾಡಿ ನಿನ್ನ ಸ್ವರೂಪವನ್ನು ತೋರಿಸು ಎಂದನು.

॥ ವ್ಯಾಸ ಉವಾಚ ॥

ಇತಿ ಸಂಸ್ಮಾರಿತಃ ಕೃಷ್ಣಃ ಸ್ಮಿತಭಿನ್ನೌಷ್ಠಸಂಪುಟಃ ।
ಆಸ್ಫಾಸ್ಯ ಮೋಚಯಾಮಾಸ ಸ್ವಂ ದೇಹಂ ಭೋಗಬಂಧನಾತ್ ॥ ೩೪ ॥

ಆನಾಮ್ಯ ಚಾಪಿ ಹಸ್ತಾಭ್ಯಾಮುಭಾಭ್ಯಾಂ ಮಧ್ಯಮಂ ಫಣಂ ।
ಆರುಹ್ಯ ಭುಗ್ನಶಿರಸಃ ಪ್ರನನರ್ತೋರುವಿಕ್ರಮಃ ॥ ೩೫ ॥

ವ್ರಣಾಃ ಫಣೇಽಭವಂಸ್ತಸ್ಯ ಕೃಷ್ಣಸ್ಯಾಂಘ್ರಿವಿಕುಟ್ಟನೈಃ ।
ಯತ್ರೋನ್ನತಿಂ ಚ ಕುರುತೇ ನನಾಮಾಸ್ಯ ತತಃ ಶಿರಃ ॥ ೩೬ ॥

ಮೂರ್ಛಾಮುಪಾಯಯೌ ಭ್ರಾಂತ್ಯಾ ನಾಗಃ ಕೃಷ್ಣಸ್ಯ ಕುಟ್ಟನೈಃ ।
ದಂಡಪಾತನಿಪಾತೇನ ವವಾಮ ರುಧಿರಂ ಬಹು ॥ ೩೭ ॥

ತಂ ನಿರ್ಭುಗ್ನಶಿರೋಗ್ರೀವಮಾಸ್ಯ ಪ್ರಸ್ರುತಶೋಣಿತಂ ।
ವಿಲೋಕ್ಯ ಶರಣಂ ಜಗ್ಮುಸ್ತತ್ಪತ್ನ್ಯೋ ಮಧುಸೂದನಂ ॥ ೩೮ ॥

---

೩೪. ಬಲರಾಮನು ಈರೀತಿಯಾಗಿ ಹೇಳಲು ಮುಗುಳ್ನಗೆ ನಗುತ್ತಾ ಆ ಸರ್ಪದ ಹೆಡೆಯಿಂದ ಸುತ್ತುವರೆದಿರುವ ತನ್ನ ದೇಹವನ್ನು ಬಿಡಿಸಿಕೊಂಡನು.

೩೫. ತನ್ನೆರಡು ಕೈಗಳಿಂದಲೂ ಮಧ್ಯದ ಹೆಡೆಯನ್ನು ಅಮುಕಿದನು. ಅದು ಛಿನ್ನವಾಯಿತು. ಆ ಛಿನ್ನವಾದ ಹೆಡೆಯನ್ನು ಹತ್ತಿ ನಿಂತು ನರ್ತಿಸಿದನು.

೩೬–೩೭. ನರ್ತಿಸುವಾಗ ಕಾಲಿನ ತುಳಿತದಿಂದ ಸರ್ಪದ ಹೆಡೆಗಳಲ್ಲೆಲ್ಲಾ ಗಾಯಗಳಾದವು. ಉನ್ನತವಾಗಿ ನಿಂತಿರುವ ಹೆಡೆಗಳನ್ನೂ ತುಳಿದು ಬಗ್ಗಿಸಿದನು. ರಕ್ತಪ್ರವಾಹವು ಹರಿಯತೊಡಗಿತು. ಸರ್ಪವು ಮೂರ್ಛೆಗೊಂಡಿತು. ರಕ್ತವನ್ನೇ ಕಕ್ಕಲು ಪ್ರಾರಂಭಿಸಿತು.

೩೮. ನಾಗರಾಜನ ತಲೆಗಳೂ ಕತ್ತುಗಳೂ ಮುರಿದುಹೋದವು, ರಕ್ತವು ಸುರಿಯುತ್ತಿದ್ದಿತು. ಇದೆಲ್ಲವನ್ನೂ ನೋಡಿ ಅವನ ಹೆಂಡತಿಯರು ಕೃಷ್ಣನ ಹತ್ತಿರಕ್ಕೆ ಬಂದು ಅವನನ್ನು ಮರೆಹೊಕ್ಕರು.

॥ ನಾಗಪತ್ನ್ಯ ಊಚುಃ ॥
ಜ್ಞಾತೋಽಸಿ ದೇವದೇವೇಶ ಸರ್ವೇಶಸ್ತ್ವಮನುತ್ತಮ ।
ಪರಂ ಜ್ಯೋತಿರಚಿಂತ್ಯಂ ಯತ್ತದಂಶಃ ಪರಮೇಶ್ವರಃ ॥ ೩೯ ॥

ನ ಸಮರ್ಥಾಃ ಸುರಾಃ ಸ್ತೋತುಂ ಯಮನನ್ಯಭವಂ ಪ್ರಭುಂ ।
ಸ್ವರೂಪವರ್ಣನಂ ತಸ್ಯ ಕಥಂ ಯೋಷಿತ್ಕರಿಷ್ಯತಿ ॥ ೪೦ ॥

ಯಸ್ಯಾಖಿಲಮಹೀವ್ಯೋಮಜಲಾಗ್ನಿಪವನಾತ್ಮಕಂ ।
ಬ್ರಹ್ಮಾಂಡಮಲ್ಪಕಾಂಶಾಂಶಃ ಸ್ತೋಷ್ಯಾಮಸ್ತಂ ಕಥಂ ವಯಂ ॥ ೪೧ ॥

ತತಃ ಕುರು ಜಗತ್ಸ್ವಾಮಿನ್ಪ್ರಸಾದಮವಸೀದತಃ ।
ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃಭಿಕ್ಷಾ ಪ್ರದೀಯತಾಂ ೪೨ ॥

॥ ವ್ಯಾಸ ಉವಾಚ ॥
ಇತ್ಯುಕ್ತೇ ತಾಭಿರಾಶ್ವಾಸ್ಯ ಕ್ಲಾಂತದೇಹೋಽಪಿ ಪನ್ನಗಃ ।
ಪ್ರಸೀದ ದೇವದೇವೇತಿ ಪ್ರಾಹ ವಾಕ್ಯಂ ಶನೈಃ ಶನೈಃ ॥ ೪೩ ॥

---

೩೯. ದೇವದೇವನಾದ ಕೃಷ್ಣನೇ, ಸರ್ವರಿಗೂ ಅಧಿಪತಿಯಾದ ನಿನ್ನ ಮಹಿಮೆಯನ್ನು ತಿಳಿದವರಾರು? ನೀನು ಜ್ಯೋತಿಸ್ಸ್ವರೂಪನು. ನೀನು ಪರಮೇಶ್ವರನ ಅಂಶದವನು.

೪೦. ಉತ್ಪತ್ತಿರಹಿತನಾದ ನಿನ್ನನ್ನು ಸ್ತುತಿಸಲು ದೇವತೆಗಳಿಗೂ ಅಸಾಧ್ಯವಾಗಿರುವಾಗ ಹೆಂಗಸರಾದ ನಾವು ನಿನ್ನ ಸ್ವರೂಪವನ್ನು ಹೇಗೆ ತಾನೇ ವರ್ಣಿಸಬಲ್ಲೆವು?

೪೧. ಪೃಥಿವೀ, ಅಪ್, ತೇಜಸ್ಸು, ವಾಯುಗಳೆಂಬ ಪಂಚಭೂತಾತ್ಮಕವಾದ ಈ ಬ್ರಹ್ಮಾಂಡವು ನಿನ್ನ ಅಲ್ಪಾಂಶವು. ಇಂತಹ ನಿನ್ನನ್ನು ನಾವು ಹೇಗೆ ತಾನೆ ಸ್ತುತಿಸಬಲ್ಲೆವು?

೪೨. ಜಗತ್ಸ್ವಾಮಿಯೇ, ನಮ್ಮನ್ನು ಅನುಗ್ರಹಿಸು. ನಾಗರಾಜನು ಪ್ರಾಣಗಳನ್ನು ಬಿಡುತ್ತಿರುವನು. ಆದುದರಿಂದ ನಮಗೆ ಪತಿಭಿಕ್ಷೆಯನ್ನು ನೀಡು ಎಂದರು.

೪೩. ತನ್ನ ಹೆಂಡತಿಯರು ಈರೀತಿ ಕೃಷ್ಣನನ್ನು ಪ್ರಾರ್ಥಿಸುತ್ತಿರಲು ನಾಗರಾಜನು ಸ್ವಲ್ಪ ಸಮಾಧಾನಮಾಡಿಕೊಂಡು 'ದೇವ ದೇವನೇ ನನ್ನನ್ನು ಕಾಪಾಡು' ಎಂದು ಹೇಳುತ್ತಾ ಅವನನ್ನು ಕುರಿತು